ದಿ । ಸತ್ಸಾಧನವಮಾಡಿಸುವ ॥ ಶೋಭಾನೆ ॥ ೫ ॥ ॥೭೬॥

ಬಾಗಿಲು ತೆಗಿಯುವ ಹಾಡು. ರಾಗಾ ಸೌರಾಷ್ಟ್ರ ಆದಿ ತಾಳ.

ಬಾಗಿಲುತೆಗಿಯೆಭಾಮಾರಮಣನಾ । ಬಂದಿರುವೆನೆಭೂಜಾಶರ ।
ದಿಂದುವದನೆಪ್ರೋಸೀತೆ ॥ ಪ ॥ ಕೂಗುವದೇತಕೆನಿಮ್ಮಯಹೆಸರೇ । ನೀಗೆ
ತಿಳಿಸಿರ್ಯೆಸ್ವಾಮಿ । ನುಡಿ । ಭಾಗವತಜನಪ್ರೇಮಿ ॥ ಅನು ॥ ಹೀನತಮನ
ಮುರಿದಜಗಕೆಶ್ರುತಿಗಳಿತ್ತ । ಮೀನವತಾರನೆನಾನುಬಾ । ಜಾನಕಿಬೇಗನೆ
ನೀನೊ ॥ ಮೀನಾದರೆನೀರೊಳಗಿರುವದುಸರಿ । ಮಾನಿನಿಯಲಿಕಾರ್ಯ
ವೇನು । ನಡಿ । ದೀನಜನರಸುರಧೇನು ॥ ೧ ॥ ಕಮಠನಾಗಿಬೆನ್ನಲಿಗಿರಿಧರಿಸಿ
ದೆ । ಕಮಲನಯನೆನಾಕೂರ್ಮದಿ । ಗಜ । ಗಮನೆಯೇನೋಡನುರಾಗದಿ ॥ ಭ್ರ
ಮೆಯಹಾತಕೆಕೇಳ್ ಕಮಿನಾಂಗಗೆನೀ । ಸಮಳನಿನಗೆನೀನೋಡುಸಂ । ಭ್ರಮವಿದ್ದ
ಲಿನಲಿದಾಡು ॥ ೨ ॥ ಹಿರಣ್ಯಾಕ್ಷನಕೊಂದೆತ್ತಿದಭೂಮಿಯು । ವರಾಹ
ರೂಪನೆಕಾಮಿನಿ । ಪ್ರೋ । ಕರುಣಿಯರೊಳಗೆಶಿರೋಮಣಿ ॥ ವರಾಹನಾದರೆಯ
ಹವಿಯಾತಿರುಗುತ । ಲಿರದೇತಕೆಯಿಲ್ಲಿಬಂದೆನಡಿ । ಪರಿಪರಿಮೃಗಗಳಹಿಂ
ಡೆ ॥ ೩ ॥ ಛಂದಿಕಂಭದಲಿಬಂದುಹಿರಣ್ಯನ । ಕರುಳಬಗೆದನರಸಿಂಹ್ಮ । ನಾ
ನು । ಪರಮಪುರುಷಪರಬ್ರಹ್ಮ ॥ ನರಸಿಂಹ್ಮನುನೀನಾದರೆನಡಿನಡಿ ।
ಗಿರಿಗುಹೆಯೊಳಗಿರುಹೋಗ್ಯೆ । ಬಹು । ಪರಿನುಡಿಗಳುನಿನಗೇಕೈ ॥ ೪ ॥ ಭೂ
ಮಿಯುದಾನವಬೇಡಿಬಲಿಯಗೆದ್ದ । ವಾಮನನಾನವಳನಾರಿಸು । ಅಮರಾ
ದ್ಯರಿಗುಪಕಾರಿ ॥ ಬ್ರಹ್ಮಣನಾದರೆನಮಿಸುವೆಚರಣಕೆ । ಹೋಮ
ಧ್ಯಾನಜಪವಮಾಡೈನಿ । ಭಕ್ತಮಾನವರಪಥನೋಡೈ ॥ ೫ ॥ ದುರುಳನೃಪ
ರಸಂಹರಿಸಿತವನಿಯಭೂ । ಸುರರಿಗೆಕೊಟ್ಟೆನೆದಾನವ್ರಕೇಳ್ । ಪರಶುರಾ
ಮಾಭಿಧಾನವು ॥ ವರಮಾತೆಯಶಿರವರಿದವನೀನಂತೆ । ಸರಸವೇತಕೆನ್ನಲ್ಲಿ ॥ ಮಾ
ನ । ಬರುವಲ್ಲಿಗೆತೆರಳಲ್ಲಿ ॥ ೬ ॥ ತಾಯನುಡಿಗೆತಮ್ಮಗೆರಾಜ್ಯವಕೊ
ಟ್ಟ । ಪ್ರೀಯುದಿವನದೊಳಗಿದ್ದೆನೆಜ್ಜೆ । ತ್ರ್ಯೇಯುನಿಶರವನುಗೆದ್ದೆನೆ ॥ ಶಾ
ಯುತ್ಲೀರದಿಬಳಲುವಮನುಜಗೆ । ಸ್ತ್ರೀಯರಲ್ಲಿಹಿತವೇನ । ಕಮ । ರಾಯ
ತಾಹೋಣನಡಿನೀನೊ ॥ ೭ ॥ ನಾರಿಯರನುಕೂಡಿರಾಸಕ್ರೀಡೆಯೋಳ್ । ಕೋ
ರಿಪರಿಪರಿಚಿತ್ರವಪಿ । ಚೋರಿಸುನೀವೇದಶಾಸ್ತ್ರವ ॥ ಜಾರಪುರುಷನಿಗೆ
ಹೋಲುವಳಲ್ಲವು । ಸಾರಪತಿವ್ರತೆನಾನಯಿ । ನ್ಯಾಯರಾತಿಳಿಸುವತ್ನನೀ
ನೊ ॥ ೮ ॥ ಪತಿವ್ರತೆಯರಸದ್ವ್ರತವಕೆಡಿಸಿದಾ । ಪ್ರತಿನಬುದ್ಧನೆಲತಾಂ

ಗಿವ್ರೊ । ಪತಿವ್ರತೆಳೆಮೋಹನಾಂಗಿ ॥ ಚಿಕುರನೆನಾಸ್ತಿಕಶಾಸ್ತ್ರವಪೇಳಿದೆ । ಕೈಕಳವಾಡದಿರುಬಲ್ಲೆಕೇ । ಕತಿಮೋಹಕಸೀನಲ್ಲ ॥ ೯ ॥ ಹಲವ್ರನುಡಿಗಳೇನುಕಲಿಯುಗಾಂತದಲಿ । ಮಲಕಮನುಜರನುಕೊಲ್ವೆನೇವ್ರೋ । ಲಲನೆನೋಡುಬಲುಚೆಲ್ವನೇ ॥ ಕಲಿಕಿತನವತೋರಿಸದಿರುಯಿಹಪರಿ । ಹಲವುವೇದನಿನಗೇಕೆ । ಕೇಳೆಲವ್ರೊಸ್ವಾಮಿನುಡಿಜೋಕೆ ॥ ೧೦ ॥ ವೇದವಲ್ಲಿಸುರ್ವೇಕನಾನುಪರಿ । ಪೋಷಿಸುವೆನುನಿಜಭಕ್ತರನಂ । ಶೋಷಿಸುವೆನುಧರ್ಮಯುಕ್ತರಾ ॥ ಪೋಷಿಸುವನುವೀನಾದರೆಲ್ಲಿನಿನ್ನ । ವಾಗಪೇಳುನಿಜವೀಗಾ।ಪರಿ।ಹಾಸವೇಕೆನುಡಿಬೇಗಾ ॥ ೧೧ ॥ ಸರ್ವರಹೃತ್ಕಮಲಗಳುಬೆಳಗಿಸುವ । ಪರಮಾತ್ಮನುನಾಕೇಳೆ।ಯೆನ್ನ । ಮರಳಿಯೇನೆಯಲಿಬಾಲೆ ॥ ಅರಿತೆನೀಗಬಹುಸಂತಸವಾಯಿತು । ಯಾರಗುವೆಚರಣಕೆನಾನು।ನಿನ್ನ॥ಸರಿಯಾರ್ಕೆಧೊರೆನೀನೊ ॥ ೧೨ ॥ ಧರೆಯೊಳಯೋಧ್ಯಾಪುರದಂಸನಮಗ । ಗುರುರಾಮವಿಠಲನೆನಾನಿವ್ರೋ । ತರುಣಿನಿನಗೊಲಿದುಬಂದೆನು ॥ ಧರಣಿಕನಯೆವಸುನಾಚಿಕೆಯಿಂದಲಿ । ಕದವನುತೆಗದಳುಆಗಾಚರ । ಣಗಳನುತೊಳೆದುಳುಬೇಗಾ ॥ ೧೩ ॥ ॥೭೭॥

॥ ಲಾಲಿ ॥ ರಾಗಾ ನವರೋಜು ತಾಳಾ ಝಂಪೆ.

ಲಾಲಿಧೀವನಚರಣ । ಲಾಲಿಭವಹರಣ । ಲಾಲಿಲಕ್ಷ್ಮೀರಮಣಲಾಲಿನತಶರಣಾ ॥ ಲಾಲಿ ॥ ಪಲ್ಲ ॥ ಲೀಲಾವಿನೋದದಲಿಪಾಜಗವಸೃಜಿಸಿ । ಪಾಲಿಸುವೆನಿನ್ನವಾಪ್ಯಾಪಾರವನುಸರಿಸಿ । ಕಾಲಕಾಲಾರ್ಚಿತನೆ । ಕಲುಷಹರನೆಂದು । ನೀಲಾಹಿವೇಣಿಯುರುನಿನ್ನತೂಗುವರೂ ॥ ೧ ॥ ಕ್ಷೀರಪರಿಯಂಕದಲಿಶ್ರೀಸಮೇತದಲಿ।ತೋಷದಿಂಪವಡಿಸುವೆಪ್ರಳಯವಾರಿಯಲಿ। ಭಾಷಾಪತಿಯುಪಡೆದನಾಖಿಳವಿಮಲದಲಿ । ಪೋಷಿಸುವೆಜೀವರನುಸರ್ವಕಾಲದಲಿ ॥ ೨ ॥ ಶ್ರೀರಮಾನಾಥನಾಶ್ರಿತಜನೋದ್ಧಾರಾ । ಘೋರಪಾಪವಿದೂರಕುಜನಸಂಹಾರಾ । ನಾರಾಯಣಾಚ್ಯುತಾನಂತಾವತಾರ । ವಾರಿಜಾಯತನೇತ್ರಗುರುರಾಮವಿಠಲಾ ॥ ಲಾಲಿ ॥ ೩ ॥ ॥೭೮॥

ನಿದ್ರಾಪದಾ. ಪದ ರಾಗಾ ಸುರಟಿ ಅಟತಾಳಾ.

ನಿದ್ರೆಗೈಯ್ಯುವೆನಮ್ಮಸ್ವಾಮಿ । ರಾಮ । ಭದ್ರಮಾಜಗದಂತರ್ಯಾಮಿ ॥ ಪ ॥ ಸದ್ಗುಣವಾಡದಿರಿನ್ನುಸಾರಸಾಕ್ಷಿಯರೆಲ್ಲಾ । ಸತಿಸೀತೆಸಹಿತಹುವ್ವಿನಮಂಚದಲಿಮಲಗಿ ॥ ಅ ॥ ಪೋಗಿನಿಮ್ಮಯಸದನಗಳಿಗೇ । ಪೃಥ

ಯು । ಪೋಗೋಣುಬನ್ನಿಸನ್ನಿಧಿಗೇ । ಯೋಗೀಜನರುಪರವಶಾ । ಭಾಗವತೋತ್ತಮರು । ಸಾಗಿಬರ್ಪರುನಿಜಾಶ್ರಮಗಳಿಗೆಲ್ಲರು ॥ ೧ ॥ ತುಂಬುರನಾರದಾದಿಗಳುವೀಣೆ । ತಂಬೂರಿದಿವ್ಯನಾದದೊಳು । ಗಂಭೀರಸ್ವರದಿಂದಾಗಾಯನಗಳಪಾಡೆ । ಸಂಭ್ರಮದಲಿಯಿತರಹಂಬಲಮರತೀಗ ॥ ೨ ॥ ಹದಿನಾಲ್ಕುಲೋಕಪಾವನಾಳ್ದತಾತ । ಚಿದಾನಂದುಜನರಿಗೆಬೇಳ । ಸದಮಲಾತ್ಮಕಶ್ರೀಗುರುರಾಮವಿಠಲನಂ । ಬಿದವರಿಗಭಯವಕೊಡುವಯಿಷ್ಟದಿಂದ ॥ ೩ ॥ ॥೭೯॥

ಉದಯರಾಗ ಭೂಪಾಳಿ ತಾಳ ಅಟ.

ಯೇಳಯ್ಯಸ್ವಾಮಿಯೇಳಯ್ಯ ॥ ಪ ॥ ಯೇಳುಶ್ರೀಭೂದುರ್ಗಾಲೋಲಭಕ್ತಜನ । ಪಾಲವೇಣುಗೋಪಾಲಬಾಲ ॥ ಯೇಳುಯಿಂದ್ರಾದಿಸುರಾಳಿಗಳೆಲ್ಲಾನಿ । ನ್ನಾಳಿಗಬುಯಸಿಕಾದಿರುವಾರೆಳ್ಯಣ್ಣಾ ॥ ಅ ॥ ರಕ್ಕಸರನೆಲ್ಲಾಸೊಕ್ಕುಮುರಿಯುವಪೇ । ಪಕ್ಕಿತನಯುಬೇಗಯೇಳಯ್ಯ ॥ ಅತ್ಯುರಗೆವುನಾನದಿಯೊಳುನಿನ್ನನಿ । ಜಾತ್ಯತಿಕೋರುವೆಯೇಳಯ್ಯ ॥ ವತವನಾತವರಳಿಗೆಕಟ್ಟಲುವಾರಗಳ । ಮುರಿದವಗಾಹಾತ್ಮನೆಯೇಳಯ್ಯ ॥ ತರುಣಿಯರೊಡನೆರಾಸಕ್ರೀಡೆಯಾಡಿದ । ಪರಮರಸಿಕನೀನುಯೇಳಯ್ಯಾ ॥ ೨ ॥ ಬಿಲ್ಲುಹಬ್ಬವಂತೆಮಲ್ಲಯುದ್ಧವಂತೆ । ಬಲ್ಲಿದವನುನೀನಂತೇಳ್ಳಯ್ಯಾ । ಕಲ್ಲಕಂಸನಕೊಂದು ತಾತನರಾಜ್ಯದಿ । ನಿಲ್ಲಿಸುವರೆಬೇಗಾಯೇಳಯ್ಯ ॥ ೩ ॥ ದೇವದೇವೋತ್ತಮನೆಭಾವಜನಾಭಂಗಿಸಿದೇವಿಕೈಪಿಡಿಯುಬುಯೇಳಯ್ಯ । ದೇವಿಹರಹದಿನಾರುಸಾವಿರವಾಳದ । ಭಾವಜಪಿತಕೃಷ್ಣಯೇಳಯ್ಯಾ ॥ ೪ ॥ ನರಗೆಸಾರಥಿಯಾಗಿಜಯವಕೊಡಿಸಿಯುಧಿ । ಷ್ಠಿರಗೆಪಟ್ಟವಗಟ್ಟಯೇಳಯ್ಯಾ । ನರನಂತೆನಟಿಸಿಬಾಸರಪರಿಪಾಲಿಪ । ಗುರುರಾಮವಿಠಲನೆಯೇಳಯ್ಯಾ ॥ ೫ ॥ ॥೮೦॥

ಸೇವೆಯ ಪದಗಳು ಮುಗಿಯಿತು.

—*ಬೋಧೆಯ ಪದಗಳು ಪ್ರಾರಂಭ.*—

ನರಹರಿಯೇ ಪಾಲಿಸೋ ಮಟ್ಟು.

ಗಜವದನಾಗಣೇಶಾ ॥ ಪ ॥ ನೀ । ಮೊದಲುಸಕಲವಿಘ್ನಗಳಳಿಯೊ ॥ ಅ ॥ ಗಿರಿಜಾಮಲಸಂಭೂತನನೇನವೊ । ಹರಿಬ್ರಂಹ್ಮಶಿವಾದಿಗತಿ

ಪ್ರಿಯನೆ ॥ ೧ ॥ ಲಂಬೋದರನೇ । ರಂಗವಿನಾಯಕ । ಶಂಬುಕ ಶುಕ್ಲಾಂಬರಧರ ॥ ೨ ॥ ಸರೋಜಾಂಬಕಗೆ । ಗುರುರಾಮವಿಠಲನ । ಸ್ಮರಿಸುವ ಸುಜನರಿಗಭಯವಕೊಡು ॥ ೩ ॥ ॥೮೧॥

ರಾಗ ಸಾವೇರಿ ತಾಳ ಆದಿ.

ಪ್ರದೋಷಕಾಲ । ವಿದೀಗನೀವರೆ । ಯಾದೇನೆನೆಯೊಶಿವನಾಶಂಕರನಾ ॥ ಪ ॥ ಸದಾಸಕಲಸುರರಿಂದಕೂಡಿಕಕ । ಕಧಿಂಯೆನುತಕುಣಿಯುವಶಿವನೀಗಲು ॥ ಅನು ॥ ತಂಬೂರಿವೇಣುವೀಣಾತಾಳವೃದಂಗಾದಿಸಕಲವಾದ್ಯಗಳೂ । ಸಂಭ್ರಮದಿಂನಂದಿಭೃಂಗಿಗಳುಶಿವಶಂಭೋಯೆಂದುಸುನಾದಗಳೂ । ರಂಭಾದ್ಯಪ್ಸರರೂ । ಪಾಡುತಿರೆತುಂಬುರನಾರದರೂ । ನುತಿಸಿಹೇರಂಬಜನಕವಿಶ್ವಂಭರಯೆಂಪುದಿ । ಗಂಬದನಾಗಿಚಿದಂಬರಕುಣಿಯುವ ॥ ೧ ॥ ಭೂತಿಯನುಪೂಸಿವ್ಯಾಳೋರಗಗಳಭೂಷಣಗಳಮಾಡಿ । ಪ್ರೀತಿಯಿಂದಗಜಚರ್ಮಪೊದ್ದುತಾಭಿಕ್ಷವನೊಬೇಡಿ । ಪಾತಕಗಳಕಳದೂ । ಜೀವರಿಗೆತಾತನಾಗಿಮೆರದು । ಶ್ರೀಶೈಲ । ಜಾತೆಸಹಿತಪ್ರಖ್ಯಾತನಾಗಿಭವಭೀತಿಬಿಡಿಸಿದುಃಖವೇಶರಕೊಡುವನು ॥ ಪ ॥ ೨ ॥ ಗಿರಿರಾಜಕುಮಾರಿಕೈವಾಗಿದುತನ । ಗೆಲುಹುಕಶ್ಯವೆನಲೂ । ಕೆರವಾಗಿದು । ಪರಮಪುರುಷದಿಂದನುಡಿದದೇವಗೆಸುರರುಫಲದಾಯನಲೂ । ಪರಮಸುಗುಣಸಾಂದ್ರಾ । ಶೀಲಾದಿನಕರಕುಲಾಬ್ಧಿಚಂದ್ರಾ । ರಘುವರ । ಪರಾತ್ಪರನುಶ್ರೀಗುರುರಾಮವಿಠಲ । ವರತಾರಕಮಂತ್ರವಿದೇಯಾಂದನು ॥೩॥ ॥೮೨॥

ರಾಗ ಶಂಕರಾಭರಣ ತಾಳ ಅದಿ.

ಮಾರುತೀ । ಗುರುಮಾರುತಿ । ನಿನ್ನಕೀರುತಿಭಕ್ತಸಾರಥಿಜಯ ॥ ಪ ॥ ಧೀರಶರಧಿಗಂಭೀರನಶಜನೊ । ದ್ವಾರಪವಿನಿಭಶರೀರಮಹಾವೀರಾ ॥ ಅ ॥ ಸಂಜೀವರಾಯ।ಆಂಜನೇಯಭವ । ಭಂಜಕನೀನೆಪ್ರಭಂಜನತನಯ ॥ ೧ ॥ ಸೀತಾದೇವಿಯ।ಪ್ರೀತಿಪೊಂದಿದೆ । ದಾತಶ್ರೀರಾಮನ।ದೂತಾಗ್ರಣಿಯೆ ॥ ೨ ॥ ರೋಮರೋಮಕೆಕೋಟಿ।ಲಿಂಗಧರಿಸಿಗುರು।ರಾಮವಿಠಲನನಿಷ್ಕಾಮದಿಭಜಿಸುವ ॥ ೩ ॥ ॥೮೩॥

ರಾಗ ಧನ್ಯಾಸಿ ತಾಳ ರೂಪಕ.

ಉದಯಕಾಲಪದಗಿತೀಗಲೂ । ನಿನ್ನಿನ್ನಂಶರವಿ ॥ ಪ ॥ ಪದುಮನಾಭನಸ್ಮರಿಸುಕವೋ । ಧಣಿಯಾನಿಲ್ಲೀಕಬುಧರುವಳ್ಳಿತೆ ॥ ಅ ॥ ಅ

ಪರರಾತ್ರಿಯಲ್ಲಿಯುಸ್ವ್ನ | ಚಿಗಲಚಿತ್ರರಾಗೆದಲಿಸು ॥ ರಪನೆಪಿಸೆಯನೋ ಡಿನವಿಸಿ | ಸುಫಲಗಳನುಪಡೆಯುವರಿಗೆ ॥ ೧ ॥ ಕಣ್ಣುತೆರದುಕೈಗಳು ಜ್ಜಿ | ಕನ್ನಡಿಯನುನೋಡಿಕಾಂಚ ॥ ವಿನ್ನುತೀರಿಸಿಸ್ನಾನಸಂಧ್ಯೆಗ | ಳ ನ್ನುವಶಾಳ್ಪಸದ್ವಿಜರಿಗೆ ॥ ೨ ॥ ಬ್ರಂಹ್ಮಯಜ್ಞಜಪವುಮುಖ್ಯ | ಕ ರ್ಮಗಳೆಂಸವಿಕೃನಾವುಳ | ಧರ್ಮವುರಾತಿಗುರುರಾಮವಿಠಲ | ನ ಮ್ಮನದಲಿಧ್ಯಾನಿಸುವರಿಗೆ ॥ ೩ ॥ ॥೭೪॥

## ರಾಗ ಭೂಪಾಳ ತಾಳ ಜಂಪೆ.

ಬೆಳಗಾಯಿತೇಳಿರೈಯಸ್ಯಾಜನರೆ ॥ ಪ ॥ ಹಳಹೊರಗೆಅಂಧಕಾರವು ವ್ಯಾಪಿಸಿರೆಂರಾತ್ರಿ | ಲಲನೆಯರಳಕ್ಕಿಯಲಿನಿದ್ರಾಭರದಿಶಾಲ | ಕಳದು ಹೋಯಿತುಕೋಳಿಕೂಗುತದೆಪೂರ್ವದಿಸೆಕೆಂಪ್ಹರಿದುಪಕ್ಷಿನಿಕರ ॥ ಕಳ ವಳನೆಕವುತಮ್ಮಸ್ತಳಗಳನುಬಿಟ್ಟುತಾವ್ | ಕಲಕಲಧ್ವನಿಯಿಂದಬೆಸೆಬೆಸ ಗೆಪೋಗುತವೆ | ಜಲಜಾಪ್ತನೈಕರುವನದೆನೋಡಿನೀವಿನ್ನು | ಮಲಗಿರು ವದುಚಿತವಲ್ಲಜನರೆ ॥ ಅ ॥ ಪಾರವೆಯನುಬಿಟ್ಟುಕಣ್ತೆರದುಕೈಯುಜ್ಜಿ ಶ್ರೀ | ಹರಿಯುಸಂಸ್ಮರಿಸಿಗುರುಹರಿಯರಡಿಗಳಗೆರಗಿ | ಧೀರೆಭಾಗ್ಯವಂ ತಗೋಸತಿಯರಿಗೆನಮಿಸಿದರ್ಪಣನೋಡಿನಿತ್ಯಕೃತ್ಯ | ತ್ವರದಿಂದನಡಸಿ ನಿನ್ನಿನಕಾರ್ಯಗಳನೆನಡು | ಹರುಷದಲಿನಿಮ್ಮವಿದ್ಯೆನುಕೂಲದಂತೆಯಾ | ಚರಿಸುತ್ತಶ್ರವಣಮನನಾದಿಸಾಧನದಿಯಿಹ | ಪರಸುಖಂಗಳಪಡಿಯಿರೈಜನ ರೇ ॥ ೧ ॥ ವ್ಯರ್ಥಕಾಲಕ್ಷೇಪವಮಾಡದಿರಿಯಿದರಿಂದ | ನರ್ಥಬರದಂತೆ ಯೋಚಿಸಿಯಿರಾಗನಾಪೇಕ್ಷೆ | ತಾರ್ಥರೆಂದಿರಬೇಡಿಯಿರಾದೇಹಸ್ಥಿರವಿಲ್ಲ | ಮತ್ರ್ಯಜನ್ಮವುದುರ್ಲಭ | ಕರ್ತರಾಪೆಂದಹಂಕರಿಸದಲೆಸಕಲವನು | ತೀರ್ಥಪಾದಗೆಸಮರ್ಪಣೆಗೈಯ್ಯಮನದಿಪ್ರ | ಪ್ರೀತಿಯಾಗುವದುಸಂ ಶಯವಿಲ್ಲಸಕಲವೇದಗಳುಸಜ್ಜನರುಸಾಕ್ಷಿ ॥ ಜನರೇ ॥ ೨ ॥ ನರಿಹುಲಿಯ ನೋಡಿತಾಬರೆಯಿಟ್ಟುಕೊಂಬಂತೆ | ನರಹೊರೆಯನೋಡುತಾಭರಣವ ಸ್ತ್ರಗಳುಬಹು | ಪರಿಭಕ್ಷ್ಯಗಳಬಯಸಿಋಣವಮಾಡಿ | ಜೇನಿನಲಿಬಿದ್ದನೊಣ ದಂತರದಲೆ ॥ ದೊರೆತಮುಕ್ತಿಗೆಭೋಗಭಾಗ್ಯಗಳನನುಭವಿಸಿ | ಅರಾಣಿ ಯಾಗುತದುರ್ವಿಷಯಚಿಂತೆಗಳಮರತು | ಗುರುರಾಮವಿಠ್ಠಲನಚರಣ ಸೇವೆಯಗೈದು | ಪರಮಧರ್ಮವಪಾಳಿಸಿರೈಜನರೇ ॥ ೩ ॥ ॥೭೫॥

### ಸಿದ್ಧಾಂತಸಾರಪದ ಆರಾಠ್ಯ ಮಟ್ಟು.

ಪ್ರಣವಪ್ರತಿಪಾದ್ಯನುಶ್ರೀನಾರಾ । ಯಣನೊಬ್ಬನೆಧ್ಯೇಯ ನುಜಗಕೇ ॥ ಪ ॥ ತ್ರೈಣವಾದರೂಕದಲದುಅವನಿಲ್ಲದೆ । ಯುನುಕಪ್ರೋಗಳು ವದುಶ್ರುತಿತತಿಯೂ ॥ ಅನು ॥ ಮೊದಲುಮಧ್ಯಕಡೆನೋಡಲುನಿಸ್ಸಂಶಯ ವಾಗಿರುವದುಸದ್ಬೋಧೆ ॥ ಮೊದಲುಮಧ್ಯಕಡೆಗೊತ್ತಿಲ್ಲದಲೆಯು । ಪಾರ್ಥ ಪೇಳುವದುದುರ್ಬೋಧೆ । ಸದಮಲರಾವಾಗುವೆವೆಂಬುದುರಾ । ಜಸ ಜೀವರಿಗೊಂದೇವೇಧೆ ॥ ತುದಿಗೆಯಾರಡುಗುಂಪಿನವರನುವಿಚಾ । ರಿಸಿಮಾ ಳ್ಪನುಕಾಲನುಬಾಧೆ ॥ ೧ ॥ ತಾಯಿಮಬ್ಬಳಿಗೆಮಕ್ಕಳುಮೂವರು । ತ ತ್ವವಿದೇನಿಶ್ಚಯದಾರಿ ॥ ನ್ಯಾಯಕಲಿಪುರಂಜನಬ್ರಹ್ಮರುಯಿವ । ರಾ ಯಕವಿವರಿವರಿಗೆಬಾರಿ ॥ ದಾಯಭಾಗಕಮಗುಂಟೆಂದಾಡುವ । ದೈರ್ಘ್ಯ ಕತಮ್ಮೊಳುತಾವುಸೇರಿ ॥ ರಾಯರಬಲವಿಲ್ಲವರಿಗೆಬರಿದೆ । ರಾದ್ಧಾಂತ ಪರಸ್ಪರಸೇರಿ ॥ ೨ ॥ ತಾಮಸಜೀವರಮತಸರಿಯಂಬುದುನೇಮವಾಗಿವೇ ದದೊಳಿಲ್ಲ ॥ ಕಾಮುಕರಿಗೆಸದ್ಬೋಧೆಪೇಳುವದು।ಖಂಡಿತವಾಗಿಪ್ರಶಸ್ತವ ಲ್ಲ ॥ ಪಾಮರರಾಗಿಹಮಧ್ಯಮಜನಸಂ । ಪಾದಿಸಿದರೆದಕ್ಕುವದಿಲ್ಲ ॥ ಸ್ವಾ ಮಿಯಹಾದಶ್ರೀಗುರುರಾಮವಿಠಲತಾ । ನೀಮೂರ್ವ್ವರಮರ್ಮವುಬಲ್ಲ ॥೩॥

॥೪೬॥

### ಚಂದ್ರಗುಣಸಾಂದ್ರ ಮಟ್ಟು.

ವೇದಾಬಲುಸ್ವಾದಾ ॥ ಪಲ್ಲ ॥ ಸಾದರದಲಿಬಿಡದೋದಿಹಮಿಸುವ ಗೆ ॥ ಅ ॥ ಆದಿಯುನಾದಿಗಳ । ಹಾದಿಯತೋರಿಸ । ವಾಧಿಗುಹ್ಯಪ್ರಾ ತೀತಾರ್ಥಗಳಿಹ ॥ ೧ ॥ ಅನುದಿನಶ್ರವಣಮ । ನನನಿಧಿಧ್ಯಾಸನ । ಘ ವಸಾಧನೆಗಳ । ಗನುಕೂಲಿಸುವದು ॥ ೨ ॥ ಸ್ವರಿತೋದಾತ್ತನು । ದಾ ತ್ತಪ್ರಚಯುಗಳಿಂ । ಗುರುರಾಮವಿಠಲನ । ಚರಣನೋಡುವದಕೆ ॥ ವೇ ದಾ ॥ ೩ ॥ ॥೪೭॥

### ರಾಗ ಮುಖಾರಿ ಝಂಪೆ.

ಹಣವೆನಲುಹಣವೆಲ್ಲಹಣವಿಲ್ಲದವರಿಲ್ಲ ॥ ಪ ॥ ಗಣಿಸಲುಮಹತ್ಮರೆ ಹಣವಂತರೈಯ್ಯ ॥ ಅನು ॥ ಹಣವುವಿದ್ಯೆಯುತಪಸಿಲೋಂಛವೃತ್ತಿಗಳು ಬ್ರಾಹ್ಮಣಗೆಕ್ಷತ್ರಿಯರಿಂಗೆಶೌರ್ಯಾದಿಗಳ್ । ಘನೆಚವಾಕೃಷಿಯುಕ್ತಿ ಗಳುವೈಶ್ಯರಿಗೆಶೂದ್ರ । ಜನಕೆಪರಿಚರ್ಯೆಕೃಷ್ಯಾದಿಗಳೆಹಣವೂ ॥ ೧ ॥ ಮೋಸವತಿಲಾಭಸಟೆಕಪಟಬಾಯ್ಬಡುಕತನ । ದೋಷತಸ್ಕರನಧರ್ಮಗೆ

ಳಿಂದಲಿ । ಘಾಸಿಯಿಂ ಗಳಿಸಿರುವ ಲೇಶವಾದರು ಪುಣ್ಯ । ರಾಶಿಯನು ಕೆಡಿಸದೇ ಲೇಸು ಮಾಡುವದೇ ॥ ೨ ॥ ಸತ್ಯರಿಗೆ ಯಾಚನೆಯು ನಿತ್ಯ ಯಾಚನೆರಜಕೆ । ಅತ್ಯಾಶೆಪಡುವಕೆಯು ತಾವು ಸರಿಗೆ ॥ ಸತ್ಯಸಂಕಲ್ಪಗುರುರಾಮವಿಠಲನ ಸದ್ಭೃತ್ಯ ಚಿಂತಿಸುವವಗೆ ಕೈಕಂಬಹಣವು ॥ ೩ ॥ ॥೮೮॥

ರಾಗ ತೋಡಿ ತಾಳ ಆದಿ.

ನೀನಾಗಿ ನಿನ್ನೊಳಗಿರುತಿರುವವನ । ಧ್ಯಾನಿಸುತಿರು ಜೀವಾ । ಯುಲ್ಲವವನಸೇವಾ ॥ ಪ ॥ ಜ್ಞಾನಿಗಳೊಡನಾಡದೆ ಸಂಸಾರದಿ । ನಾನೆ ಕರ್ತನೆಂದು ನರಕಪೊಂದುವೆಯಾಕೆ ॥ ಅ ॥ ಜಾಗರಸ್ವಪ್ನಸುಷುಪ್ತ್ಯವಸ್ಥೆಗಳನು । ಜಾಗುವ ಮಾಡದೆ ನಿರುತಾ । ನಾಗಶಯನ ವಿಶ್ವತೈಜಸಪ್ರಾಜ್ಞ । ನಾಗಿ ನಿನಗೆ ಕೊಡುವನು ಯಂದರಿಯೊ ॥ ೧ ॥ ಬಿಂಬನವನು ಪ್ರತಿಬಿಂಬನು ನೀನೆಂದು । ಹಂಬಲಿಸುವದುಚಿತಾ । ವುಂಬುಡುವದು ಮೊದಲಾದ ಕ್ರಿಯೆಗಳನು । ಅಂಬುಜಾಕ್ಷಗರ್ಪಿಸುಬಿಯಾಗೊ ॥ ೨ ॥ ಆಬ್ರಹ್ಮಸ್ತಂಭಾದಿ ಜೀವರೊಳಗೆ । ಸ್ವಾಭಾವ್ಯದಿ ಸತತಾ । ಶೋಭಿಸುತಿಹನವಗಿಲ್ಲ ವಿಭೇದಲ ॥ ಶ್ರೀಭೂರಮಣ ಶ್ರೀಗುರುರಾಮವಿಠಲನೊ ॥ ೩ ॥ ॥೮೯॥

ರಾಗ ಬಾಪಿಯನೇನೈತಿನೇಗದರಂ ವಟ್ಟು.

ಭಾಗ್ಯವಂತರ್ಯಾರು ಪೇಳಿರೈ । ಸದ್ಭಕ್ತರೆಲ್ಲರು ॥ ಪ ॥ ಭಾಗ್ಯವೊ ವೈರಾಗ್ಯವೊ ನಿಪ್ಪ್ರ । ಯೋಗ್ಯತಾನುಸಾರಾ । ಶ್ಲಾಘ್ಯವೆಂದರಿತವರ್ ॥ ಅ ॥ ಧನಿಕನು ಪರರನು ಗಣಿಸದೆ ಕ । ನ್ನನು ಸದಾ ಕೊಂಡಾಡಿಕೊಂಬನು । ಹಣವುಯಿಲ್ಲದ ಸುಗುಣವಂತನು ತಾ । ವನಜಾಕ್ಷನ ನೆನೆದು ಅನುದಿನದೀ । ಸುಖಿಸುವನು ॥ ೧ ॥ ಭೋಗದಲಿಯೆನು ರಾಗವುಳ್ಳವ । ರೋಗಿಯಾಗಿಯೆ ಕೊರಗುವ ಕೊನೆಗೆ ॥ ಯೋಗವಂತರಂದ ಭಾಗವತಜನವಿ । ರಾಗೆ । ವೈಭೋಗದಿ । ತ್ಯಾಗಿಗಳೆನಿಪರು ॥ ೨ ॥ ತಾಮಸಜನರು ಕಾಮಾದಿಗಳಿಗೆ । ತಾಮನೆಯೆನಿಸಿದ್ಧೀ ಮರುಗಿಹರ್ ॥ ಕ್ಷೇಮವುಳ್ಳ ಸಾಧುಗಳು ನಿರುತಗುರು । ರಾಮವಿಠಲನಪಿ । ಪ್ರೇಮದಿ ಭಜಿಸುವರ್ ॥ ೩ ॥ ॥೯೦॥

ರಾಗ ಸುರಟಿ ತಾಳ ಆದಿ.

ಸ್ಮಾರ್ತರನ್ನು ನಿಂದನೆ ಮಾಡುವ ಕೆಟ್ಟ । ಧೂರ್ತನ ಬಾಯ್ಮೇಲೆ ಹೊಡೀ ಹೊಡೀ ॥ ಪ ॥ ಕಾರ್ತಸ್ವರಸಮವೆನಿಸುವವರವರು । ಧೀರ್ಘಯುಕ್ತರ ಶೃತಿಶಾಸ್ತ್ರಪ್ರವರ್ತರ ॥ ಅ ॥ ಅಹರಹಸ್ಸಂಧ್ಯಾಮುಪಾಸೀತಾದಿ ।

ಬಹುಪ್ರಮಾಣದನುಸರಿಸುವರಾ । ವಿಹಿತವಾಗಿತಮ್ಮಂತೆಸರ್ವರನು । ವಿ
ಶೇಷದಿಂದರ್ಚಿಸುವವರಾ । ಶುಚಿಕಿಗಳನಿಂತುಕರಿಸಿಸದಾಬುಧ । ಕೋಟಿ
ಯುಲಿಪ್ರಕಾಶಿಸುವವರಾ । ಸಹಿಸಿಸಕಲವನುತಮ್ಮಮಾರ್ಗದಲಿ । ಸ
ಮ್ಯಜ್ಞಾನವಸಂಪಾದಿಸುವರ ॥ ೧ ॥ ವೇದಾಭ್ಯಾಸದಿಕಾಲವಕಳೆಯುತ ।
ವಿಹಿತರಿವರೆನಿಸಿಕೊಳ್ಳುವರಾ । ಭೇದಾಭೇದಗಳರಿಯುತಲೀಬ್ರಹ್ಮ । ವಾ
ದದಲ್ಲಿಸಂತೋಷಿಪರಾ । ಆದಿಪಿಡಿದುಮಾರ್ಗವುತಪ್ಪದೆಸ । ಮಾರ್ತ್ಮಪ್ರೀ
ತಿಯುಮಾಡುವರಾ । ಪಾದವನೊದಲುಶಿರಪರಿಯಂತವುಲ । ಶ್ರೀಕೃಷ್ಣನ
ಹೃದ್ಗುಹೆಯಲಿನೋಳ್ಪರ ॥ ೨ ॥ ಲೇಸಾಗಿನಿಗಮಾರ್ಥಿಯನ್ನುಬಲು ।
ಸೋಸಿನಿಂದನುಭವಿಸುವವರಾ । ಯೋಗವಿದ್ಯೆವಿಧಿಮುಖನಾಮಗಳಪ ।
ರೀಕನಲಿಸಮನ್ವಯಿಸುವರಾ । ದಾಸೋಹಂಯಂಬಖಿಲಾಮರರಿಗೆ । ಚ
ಗ್ಗಿ । ಭಕ್ತಿಯಲಿಪೂಜಿಪರಾ । ಭೂಸುರಾಂಗೆಗುರುರಾಮವಿಠಲನಳ್ಳಿ ।
ಪಾಸಂಪಾದಿಸೆಪಾತ್ರರಾದವರ ॥ ೩ ॥ ॥೯೧॥

ರಾಗಾ ರಂಗಾನಿನ್ನ ಕೊಂಡಾಡುವೊ ಮಟ್ಟು.

ದುರಹಂಕಾರಿಗಳ್ಯಯಾಕ್ಯಾವು । ಗರ್ವದಿಮೊರೆಯುವೆವೊ ॥ ಪ॥
ಅರಿಷಡ್ವರ್ಗವುಯಲ್ಲವುನಮ್ಮೊಳು । ನಿರತವುತುಂಬಿಹದೊ ॥ ಅಹುದು ॥
ಅನು ॥ ಪರಮಾತ್ಮನಸದ್ಭಕ್ತರಸಂಗ । ನಿರುತವುಕಾವುದೊ । ಹರಿಭಕ್ತಿ
ಯನುಳ್ಳನುತಜೊಗಳುವ । ನರರಲ್ಲೀಕ್ರೋಧ । ನೆರೆಕೃಣವಾದರದು
ಜನರಿಗೆಕೊಡ । ಬಾರದೆಂಬುವಲೋಭ । ಸರ್ವಸ್ವವುಹರಿಶರಣರಿಗೀವೆ
ನುಸಮ್ಮೋಹವುನಮಗೇ ॥ ಹೀಗೆ ॥ ೧ ॥ ಸುಜನರಮತವೆನಮ್ಮದುಯೆಂ
ಬುವ । ನಿಜವಾಗಿಹಮದವೊ । ಭುಜಗಶಯನನಾದರಿಸುವವರಲಿ । ಬ
ಹುಮತ್ಸರವ್ಯಾಕ್ಯಾ । ಭಜನೆಯಮಾಡದಬಾಯ್ಬಡುಕರನು । ಬಡಿ
ಯುವತಂಟಕನಾ । ಕುಜನರಕಂಡರೆಗೊಣಗುತಬೈದಾಕಲ್ಲೆಸೆಯುವೆವು
ಚೊಬ್ಬ ॥ ಹಚೊಬ್ಬ ॥ ೨ ॥ ನಮ್ಮಮತವೆಸರ್ವೋತ್ತಮವೆಂಬುವ । ಹ
ಮ್ಮೆಂದಿಹುದ್ಯಾಕ್ಯಾ । ಧರ್ಮವಿದೂರರಕಂಡರೆಕಾದುವ । ದರ್ಪೋ
ದ್ಧತಿವಂದೊ । ದುರ್ಮತಿಗಳವಗಾತಾಡಿಸೆನುಡಿಯದೆದುಷ್ಟಜಡರೆಯಿಹ
ದೊ । ಬ್ರಹ್ಮಜನಕಗುರುರಾಮವಿಠ್ಠಲನ । ಭಕ್ತಿಧನದಬಗ್ಗೆ । ನೆ
ಮಗೇ ॥ ೩ ॥ ॥೯೨॥

### ರಾಗಾ ಸುರಟಿ ತಾಳಾ ಆದಿ.

ಇವರೇನಮ್ಮವರೂ । ಇವುಭಾ । ಗ್ಯವೇನಮಗ ಹಗಲಿರಳೂ । ॥ ಪ ॥ ಭವಸಮುದ್ರದಲಿಮುಳುಗಿಸಿಕಡೆಯಲಿ । ಜವನಾಳ್ಗಳಕೈಗೊಪ್ಪಿಸಿಕೊಡುವವ ॥ ಅ ॥ ಧನಯವ್ವನಬಲವೂ । ದೇಹದ । ಅನುಬಂಧಿಗಳಿರವೂ । ಭವನಕಾವಣಾದಿಗಳಧಿಕವಾಗಿದ್ದರೆ । ಮನೆಮಕ್ಕಳುವನಿತಾದಿಗಳೊಲಿವರೂ ॥ ೧ ॥ ಕೇಳದ್ದಿಲ್ಲನಲೂ । ಇವನಹೀ । ಯಾ್ಯಳಪರಸ್ವಜನಗಳೂ । ಕಾಲಕಾಲದಿಬಾಡಿಗೆಯಾತ್ರಿನಪರಿ । ಅಳಾಗಿದ್ದರೆಹಾಯೆಂದುನಗುವ ॥ ೨ ॥ ಇವರಾಶೆಯುಮಾಡೀ । ನಾವುನ । ವ್ಯವರನುಹೋಗಾಡಿ । ಕವಳಕೆಗತಿಯಿಲ್ಲದಪರಿಯಾಯಿತು । ಕಡೆಹಾಯಿಸುಗುರುರಾಮವಿಠ್ಠಲನೆ ॥ ೩ ॥ ॥೯೩॥

### ಬಲುಮೆಯಾದ ಬಾಳಾಮಣಿ ಯಂಬ ಮಟ್ಟು.

ಮೋಘನಾಗೀಕೆಡಬ್ಯಾಡವೋ ॥ ಪ ॥ ರೋಧೀಜನಂಗಳನ್ನುನಂಬಿ ॥ ಅ ॥ ಆಡಬಾರದಮಾತಾಗ । ಳಾಡಿಯುನಗೀಡಿಲ್ಲೆಂದು । ಬೋಧಿಯುನಿಸಿಕೊಂಡುಕೊಂ । ಡಾಡಿನರರನು ॥ ೧ ॥ ತತ್ವದರ್ಶಿಯಾದವರ । ಹತ್ತಿರಿದ್ದುಗ್ರಹಿಸದೆ । ಸತ್ತುಹುಟ್ಟುತೀರುವಸಂ । ಸಾರದಿಮುಳುಗಿ ॥ ೨ ॥ ತಾರಕನುಭ್ಯಜ್ಞಾನದಿಂದ । ಗುರುರಾಮವಿಠಲನ । ಅರಿಯುವುಸುಲಭಾ । ಮರರೊಳುಸೇರಿ ॥ ೩ ॥ ॥೯೪॥

### ಬಲು ಮೋಸಹೋಕನೇ ಮಟ್ಟು.

ನಿನಗ್ಯಾಕೆದುರ್ವರ್ತಿ । ಯಾಲೆಕೋತಿ ॥ ಪ ॥ ಅನುದಿನದಿನಾವುನನ್ನದೆಂಬುದು ॥ ಅ ॥ ಮೊದಲಿಂದಲೀಅವಿವೇಕದಿಂದ । ಮೋಹಪಡುತನೀನಿರಲ್ । ತುದಿಗೆಮನಬಾಧೆಯುಹುದುಬಲು ॥ ೧ ॥ ಚಪಲಾತ್ಮರಾದವರಲಿಸೇರಿ । ಚಾಟುಮಾತುಗಳಾಡುವೇ । ವಿಪರೀತಜ್ಞಾನವಿದಲ್ಲವೇ ॥ ೨ ॥ ನಡೆನುಡಿಗಳಾದಿಯಾದಯಲ್ಲಕು । ನಾಥನೀನೆಯೇನೆಲಾ ॥ ಧೃಢವಾಗಿನಿನ್ನೊಳುತಿಳಿದುನೋಡೆ ॥ ೩ ॥ ಕಳುವಾಭಿಮಾನಿಸುರರುಮಳಗೆ । ತಾವುಪ್ರೇರಿಸದಿರ್ದರೇ ॥ ಉಕವಾಗದೆಂದಿಗುನೀನಲ್ಲಥೊರೆ ॥ ೪ ॥ ಸರ್ವಕ್ಕುಭಾರಕರ್ತನಾಗಿ । ಸೂತ್ರವಿಡಿದಾಡಿಸುವವನು । ಗುರುರಾಮವಿಠಲಪ್ರೇರೆಯುವನು ॥ ೫ ॥ ॥೯೫॥

### ಚಂಚಲನೇತ್ರ ಪದ್ಯ.

ಮನವೇಯಂದಿಗೇಯಿದು । ಕೊನೆಯಾಕಾಣುವದು ॥ ಪ ॥ ಘ
ನವಿದೆಯುಶರಧೀಯೊಳು । ಮುಳಗಿಮುಂದರೀಯಾದೆ । ತನಗೆತಾನೆಚಿಂತೆ
ಗೈಯುತ್ತಾ । ಜನರಾನೋಡಿಹಿಗ್ಗುತ್ತಾ ॥ ಅ ॥ ಮಂಗಳಾಂಗಿಯರಾ
ನೋಡುತ । ಮಾರಶರಕೆಗುರಿಯಾಗುತಾ । ಭಂಗಿತಿಂದಮಂಗನಂದದಿ ।
ಭಂಗಕೀಪಳಗಾಗುವಿ ॥ ೧ ॥ ಎಷ್ಟುದಿನಗಳಾದರೂ । ಪುಟ್ಟುವಾದಿ
ಲ್ಲಾವಿಂತ್ತಿ । ಘ್ರಷ್ಟನಾಗಿಕೆಟ್ಟುಪೋಗುವೆ । ಶ್ರೇಷ್ಠನೀನೆಂದುಕೊಂ
ಬುವೇ ॥ ೨ ॥ ಕಾಮನ್ನೈಯ್ಯನಾದಶ್ರೀಗುರು । ರಾಮವಿಠ್ಠಲನನಾಮ ।
ಪ್ರೇಮದಿಂದಾಜಪಮಾಡದೆ । ತಾಮಸರೊಳುಸೇರಿದೇ ॥ ೩ ॥ ॥೯೬॥

ರಾಗ ಸಾದನಾಮಕ್ರಿಯಾ ತಾಳ ಆದಿ.

ಅವರಕಾಯ್ಬೇಕೂ । ಕಾಲದಿಅವರಕಾಯ್ಬೇಕು ॥ ಪ ॥ ಅವ
ರಬಹುರುಚಿಯುವರಸಂಪದ । ಅವರಿಂದಲಿಮೋಕ್ಷಾದಿಸಾಧನವು ॥ ಅ ॥
ಯುಕ್ತರಾಗಿಯಿರುವಾಜನರಿಗೆ । ಭುಕ್ತಿಯುನ್ನುಕೊಡುವಾ । ಭಕ್ತರಿಗೆ
ಲ್ಲಾಬಾಯ್ಸುವಿಯಾದಾ । ಸಕ್ತಿಪುಟ್ಟಿಸುವಸರ್ವೋತ್ತಮವಾದ ॥ ೧ ॥ ಇ
ವರೆಲ್ಲಾಬೆಳದುಬಿತ್ತಿ । ವಿವರವಾಗಿಅಳದೂ । ಅವಕಡಿಮೂಟೆಯುಕಟ್ಟಿ
ಟ್ಟದ್ದರ । ಜವನವರೆಳೆಯುವಕಾಲಕೊದಗುಕ ॥ ೨ ॥ ಹಿತರಾಗೀಅವರೆ
ಮಾತಾ । ಪಿತರಾಗೀಅವರೇ । ಗತಿದಾಯಕರಾಗಿಅವರೇಭೂ । ಸುತ
ಗುರುರಾಮವಿಠಲರೀಶ್ವರುನಮ ॥ ೩ ॥ ॥೯೭॥

### ದೇವಜದಿವ್ಯಪತೀ ಪದ್ಯ.

ಸೀತಾಪತಿಮಮಲಂ । ವಂದೇಹಂ ॥ ಪ ॥ ವಾತಾತ್ಮಜರವಿ ।
ಜಾತಾದಿವಾನರ । ವ್ರಾತನಮಿತಪಾದಂ ॥ ನತಮೋದಂ ॥ ಅ ॥ ರವಿಕು
ಲದೀಪಂ । ರಮಣೀಯರೂಪಂ । ಶರಧೃತಶರಚಾಪಂ । ಖಲಕೋ
ಪಂ ॥ ೧ ॥ ದಶರಥಬಾಲಂ । ಧರ್ಮಾನುಕೂಲಂ । ದಶಶಿರಮದಹರ
ಣಂ । ಜಿತಮರಣಂ ॥ ೨ ॥ ಗುರುರಾಮವಿಠಲಂ । ಸುರಮುನಿಪಾಲಂ ।
ತುಳಸೀವನಮಾಲಂ ॥ ಸುಶೀಲಂ ॥ ೩ ॥ ॥೯೮॥

### ಬನ್ನಿಬನ್ನಿ ಪೋಗುವ ಪದ್ಯ.

ಬರಿದೆಭ್ರಾಂತಿಯಾತಕೆ । ಎರಡುದಿನದಬಾಳಿಗೇ ॥ ಪ ॥ ಕರೆಕರ
ಸಂಸಾರಕೆಕಲ । ಕಾಲವಿದಲಿಪಚ್ಚರಿಕೆ ॥ ಅ ॥ ಹಿಂದಿನವರಪಾಡನು ।

ಮುಂದರಿಯದ ಮೂಢನು । ಸಂದೇಹವೆಪಡುವೆನು । ಯಂದಿಗುಸುಖಿಯಾ
ಗೆನು ॥ ೧ ॥ ಶಾಸ್ತ್ರವೇನು ಹೇಳ್ವುದೊ । ಸ್ಥಿರವೆಅಲ್ಪಸುಖವಿದು । ಗಾತ್ರ
ವನೋಯಿಸುವದು । ರಾತ್ರಿಹಗಲುದಣಿವದು ॥ ೨ ॥ ಹಿತದಮಾರ್ಗಕ್ಕೆ
ಚಿಸುವೆ । ಅತಿಶಯಗಳಬಯಸುವೆ । ಪಥಿಕರಂತೆನಡಿಯುವೆ । ದಾಪಿ
ಯಾಚ್ಛೀವನವೆ ॥ ೩ ॥ ಸಂಸಾರವೆಂಬೊವಾರಿಧಿ । ಹಂಸೆಪಡುತಶೇರಿ
ದಿ । ಸಂಶಯಾತ್ಮನೆನಿಸಿದಿ । ಕಂಸವೈರಿಹುಮರದೀ ॥ ೪ ॥ ಯೋಗಸಿದ್ಧಿ
ಯೊಬಲವೊ । ಹೊಗಿದರಡುನಿಷ್ಫಲವೊ । ಹ್ಯಾಗನಮ್ಮಕೈಬಿಡನೆಲವೊ ।
ಶ್ರೀಗುರುರಾಮವಿಠಲವೊ ॥ ೫ ॥ ॥೯೯॥

ರಾಗ ಹಿಂದೋಸ್ತಾನಿ ತಾಳ ಆದಿ.

ವಿರೋಧವ್ಯಾಕೆಕೃಷ್ಣವಿಮಾಗದರೊಳು ॥ ಪ ॥ ಪರಂಪಂದಸಂ
ಪ್ರದಾಯಾಕೆನಮಗೆ ॥ ಅ ॥ ಈಶನಾನೆಂಬುವದೊಂದು । ಸರ್ವೇಶಹರಿ
ಯಂಬೊದೊಂದು । ಲೇಸಾಗಿಹೆಚ್ಚುಕಡಿಮೆಗಳತಿಳಿಯುವದೊಂದು ॥ ೧ ॥
ಈಮೂರುಮತಗಳಿಗೆ । ಪ್ರೇಮವಾದಭಿಪ್ರಾಯಗಳು । ನೇಮನೇಮಾ
ಮಾಗಿಟ್ಟುಕೊಂಡಿರುತಿಹರೆಲ್ಲರು ॥ ೨ ॥ ನಿಮ್ಮನಿಮ್ಮಮನಗಳಿಗೆ । ಸಮ್ಮ
ತವಾಗುವಪರಿ । ಬ್ರಹ್ಮಜ್ಞಾನವೆಂದುಸಂಪಾದಿಸಿದರಸೊಳು ॥ ೩ ॥ ಪು
ರಾಣಶಾಸ್ತ್ರವೇದ । ಮೂರುಮತಗಳಿಗೆ । ಸರಿಯಾದರ್ಥತೋರಿದಾರಿಯು
ಕೊಡುವದು ॥ ೪ ॥ ಮೂರುಮತಗಳಿಗೆಮೂರಾಗಿತೋರುವ । ಧೀರಶ್ರೀ
ಗುರುರಾಮವಿಠ್ಠಲನೊಬ್ಬನೆ ॥ ೫ ॥ ॥೧೦೦॥

ಭೋಗಾದುರಾ ನೀರಜನೇತ್ರ ಮಟ್ಟು.

ಅಶಿಪಶದೇಹವಮನುಜ । ತಿಳಿಯದಿದು । ರಾಶಿಪಶದೇಹವಮನುಜ
॥ ಪ ॥ ಮೋಸವಮಾರ್ಗಹಿಡಿದು । ಮೂಢರನ್ನನೋಡಿನೋಡಿ ॥ ಅ ॥
ಚಿಂತಿಸಿಭ್ರಾಂತನಾಗಿ । ಸಂತೋಷವಿಲ್ಲದೆಸದಾ । ಶಾಂತಚಿತ್ತರಕೂಡದೆ ।
ಸಂತೆಕೂಟವನ್ನುನಂಬಿ ॥ ೧ ॥ ಇಂದ್ರಿಯಂಗಳಸುಖ । ಪೊಂದಿಸುತ್ತನೀ
ನಿರಲು । ಮುಂದಿನಗತಿಗೋಶ್ರವು । ಸಂದೇಹವಾಗುವದಲೊ ॥ ೨ ॥
ಹೊರವಳಗುತುಂಬಿಹ । ಗುರುರಾಮವಿಠಲನ । ಚರಣರನಾಶ್ರಯಸದೆ ।
ಕರೆಕರೆಸಂಸಾರದಿದು । ರಾಸಿ ॥ ೩ ॥ ॥೧೦೧॥

ರಾಗ ಕಾನಡಾ ತಾಳ ಆದಿ.

ಒಬ್ಬನೆಯಲ್ಲರಿಗೊಸ್ವಾಮಿ ॥ ಪ ॥ ಬಲುಹಬ್ಬಅವನೆನೆಂಬಿದನೆ

ರಿಗ್ಯಾವಾಗಲು ಹರಿ ॥ ಅ ॥ ಸೃಷ್ಟಿಸಿಪ್ರೋಷಿಸಿಸಂಹಾರಗೈಸಿತನ್ನ । ಹೊ
ಟ್ಟೆಯೊಳಗಿಟ್ಟಿರುವನು ॥ ಯಲ್ಲರನು ॥ ೧ ॥ ಪೃಥಿವಿಮಲಾತ್ಮಕನಾಗಿ ।
ರವಿಮಂಡಲದೊಳಿದ್ದು । ಭುವನಂಗಳನ್ನು ಪೊರೆವನೂ ॥ ಕೇಳಿನ್ನು ॥ ೨ ॥
ಸಾಗರಸುತೆಗ ಪೇಳಿದ । ಭಾಗವತರ ಕಾಯ್ವನು । ಶ್ರೀಗುರುರಾಮವಿಠಲ
ನು । ಕೇಳಿದನೂ ॥ ೩ ॥ ॥೧೦೨॥

ವಂದಿಸುವೆವಾರಿಜನೇತ್ರಾ ಮಟ್ಟು.

ರಾಮನಾಮಕೀರ್ತನೆಮಾಡೊ । ಮುದಗೂಡೊ ॥ ಪ ॥ ಹೃ ।
ತ್ಸ್ಮರಸಡಿನೋಡೋ । ಕೊಂಡಾಡೊ ॥ ಅ ॥ ಸಾರಮರಯಂದವಾ
ಲ್ಮೀಕನ । ವರಋಷಿಯನ್ನಿಸಿದಾತನಾ । ಧರಣಿಸುತೆಯುಳಸಮೇತನಾ ।
ಮಾರುತಾತ್ಮಜಾದಿನುತನ । ಸುಚರಿತನಾ ॥ ೧ ॥ ದಶರಥನಿಗೆಮಗನಾದ
ನಾ । ಪಶುಪತಿಚಾಪವಮುರಿದನಾ । ಅಸುರರನೆಲ್ಲಸಂಹರಿಸಿದನಾ । ಬ್ರಂ
ಹ್ಮಾದಿದೇವವಂದ್ಯನಾ । ರಾಜೇಂದ್ರನಾ ॥ ೨ ॥ ಭರತಶತ್ರುಘ್ನಲಕ್ಷ್ಮ
ಣಸೇವ್ಯನಾ । ಸರಸಿರುಹಾಕ್ಷಜಭಾವ್ಯನಾ । ಪರಮಾತ್ಮಗುರುರಾ
ಮವಿಠ್ಠಲನಾ । ನೃಪಾಗ್ರಗಣ್ಯನಾದನಾ । ವಿನೋದನಾ ॥೩॥ ॥೧೦೩॥

ಮಾಯೆಲಾಡಿ ಮಂದುಬೆಟ್ಟೆವ್ರೊ ಯಂಬ ಮಟ್ಟು.

ನಿನಗ್ಯಾಕೆಚಿಂತೆಮಾನವಾ । ವನಜನಾಭನೆಕಾಯುವಾ ॥ ಪ ॥
ಅಣುಮೋಹತೃಣಕಾದ್ಯಕೊನೆಮೊದಲುಗಳೊಳ । ಮನನೋಡಿಹರುಷಿ
ಸದೆ ॥ ಅ ॥ ಈಶರೀರದೊಳಗೆಶ್ರೀಶರಾಣಿಸಹಿತಅವ । ನಿರುವದುಗುರು
ಮುಖದೊಳರಿಯಾದೆಬರಿದೆ ॥ ೧ ॥ ಇಂದ್ರಿಯಂಗಳಗೆಬ್ರಹ್ಮೇಂದ್ರಾದಿಸು
ಮನಸ । ವೃಂದವಿರುವದುಗೋ । ವಿಂದನೆಧಣೀ ॥ ೨ ॥ ಬಲಜ್ಞಾನೈಶ್ವ
ರ್ಯಾದಿಗಳುಯೋಗ್ಯತನುಸಾರ । ಮಳಗೆಗುರುರಾಮವಿಠಲಕೊಡುವನು ॥
॥೧೦೪॥ ರಾಗ ದೇವಗಾಂಧಾರಿ ತಾಳ ಆದಿ.

ನೋಡಿದ್ರೈಯುಯಿಸಾರೂಥೀಯ್ಯಾಜನರೆಲ್ಲಾ । ಮೂಡಲಗಿರಿವಾಸ
ನಾ । ವೇಂಕಟೇಶನಾ ॥ ಪ ॥ ಬೇಡಿದವರಗಳಭಕ್ತಸಮೂಹಕೆ । ನೀ
ಡುತಲಿಕೊನಿಗೆನಿಜಪದವೀವನಾ ॥ ಅ ॥ ಹರಿಹರಬ್ರಂಹ್ಮರೊಳಾವನುತ್ತ
ಮನೆಂದು । ಪರೀಕ್ಷಿಸೆಭೃಗುಮುನಿಯು । ತೆರಳಿಬಂದುಅಜಹರರನೊ
ಪ್ಪಿತಾ । ಪರಮಪದಕೆಬರಲು । ಅರಿಯದವನಪರಿಶಿರಿಯುತೊಡೆಯಮೇ
ಲೆ । ಹರಿಮಲಗಿರೆಕಂಡು । ಚರಣದಿಂದಹೃದಯುತಾಡನೆಮಾಡಲು । ಪ

ಕನೊಳಗಿತ್ತಿಯಿಂದಱುಷ್ಟಿಯುಪ್ರೂಜಿಸಿದನ ॥ ೧ ॥ ಶಿರಿಕರವೀರಪುರವನ್ನೈದ
ಉತ್ತರಿ । ಚಿಂತಿಸಿಮನದೊಳಗೆ । ಧರೆಯೊಳುವೇಂಕಟಗಿರಿಯುಸೊರಾಕ ।
ಲ್ಲಿರವಲ್ಮೀಕದಲೀ । ಸರಸಿಜಭವಶಿವರ್ಮ್ಯರುಕರುವಾಗಬಾ । ಶ್ಲಗರೆಯಾಲು
ವೋಽದಲೀ । ಧೂರಜೊಳನಭೃತ್ಯಗೋವನುಬಾಧಿಸೆ । ಕಿರದೊಳಾಂ
ತುನ್ನಹಗೆ । ಕಾಪನಿತ್ತವನಾ ॥ ೨ ॥ ಮನುಜನೋರ್ವನಟಸುಕ । ಲಂಬ
ರರಾಜನ । ತನುಜೆಯುಕೈಪಿಡಿದೂ । ನೆನೆವವರಿಗೆತಿರುಪತಿಯೆವೈಕುಂಠ ।
ವೆನುತಸಾರಿವಲಿದೂ । ಘನಮಹಿಮೆಗಳನುತೋರಿಸಕಲರಿಂ । ಕಪ್ಪಗಾಣಿ
ಕೆಗೊಳುತಾ । ಗುಣನಿಧಿಶ್ರೀಗುರುರಾಮವಿಠಲಯಿಾ । ಫಣಿಗಿರಿಯೊಳಗಿ
ರುತಿಪ್ಪತಿಮ್ಮಪ್ಪನಾ ॥ ೩ ॥ ॥೧೦೪॥

ರಾಗ ರೀತಿಗೌಳ ತಾಳ ರೂಪಕ.

ತ್ಯಾಗಾಗುವದೋತಿಳಿಯದು । ಯಾಕನಾಜ್ಞೆ ॥ ಪ ॥ ಭೋಗವ
ತರಸೇವೆಯಲ್ಲಿ । ಬಹುಪ್ರವೀಣನೆನಿಪದೊ । ರಾಗರೋಭದಲ್ಲಿಮುಳುಗಿ
ಕಿ । ರಚ್ಚೆಗಿಕ್ಕಿಬಿಡುವದೋ ॥ ಅ ॥ ಕೋರಿಕೆಗಳಬಿಡಿಸಿ । ಸದಾ । ಗುಣ
ವಂತನೆನಿಸುವದೋ । ನಾರಿಮಕ್ಕಳಾಸೆಯಲಿಯು । ಪ್ರಾರ್ಥನವಮಾಡಿಸುವ
ದೋ ॥ ೧ ॥ ದ್ವಂದ್ವಗಳಲಿರೋಷವಿಲ್ಲದಾ । ನಂದವಪ್ರೊದಿಸುವದೋ ।
ಬಂದುದುವಂದುತಿಳಿಯಗೊಡದೆ । ಮಂದಮತಿಯನಿಸುವದೊ ॥ ೨ ॥ ಶ್ರ
ವಣಮನನಸಾಧನೆಗಳ । ಸದಾಮಾಡಿಸುವದೊ । ಭವಭವದಲಿಮೂಢನೆ
ನಿಸಿ । ಬಾಳಕತನವಮಾಳ್ಪದೋ ॥ ೩ ॥ ಸರ್ವರಲ್ಲಿಗುಣವಕಾಣಿಸಿ । ಸಂ
ತೋಷಪಡಿಸುವದೊ । ದುರ್ವಿನೀತನೆನಿಸಿಸದಾ । ದುಷ್ಕಾರ್ಯವಮಾಡಿ
ಸೊವದೊ ॥ ೪ ॥ ತರತಮಪಂಚಭೇದಜ್ಞಾನ । ತತ್ವತಿಳಿಸಿಸುಖಿಪ
ದೊ । ದುರಹಂಕಾರದಲ್ಲಿಮೆರಸಿ । ನರಕದಿಬೀಳಿಸುವದೋ ॥ ೫ ॥ ದಾ
ನಧರ್ಮಪರೋಪಕಾರ । ದಯಾವಂತನೆನಿಪದೋ । ಹೀನನೆನಿಸಕಲರಿಂ
ದಗೋಳ್ಯಾಳಿಸಿಬಿಡುವದೋ ॥ ೬ ॥ ಭವಹರಗುರುರಾಮವಿಠಲ । ಭೂರ
ಕರ್ಮನಾದವ । ಅವರವರಧಿಕಾರದಂತೆ । ಯಲ್ಲರಿಗೂನಡಿಸುವಾ ॥ ೭ ॥
॥೧೦೫॥ ರಾಗ ಶಂಕರಾಭರಣ ತಾಳ ಆದಿ.

ಇದೇಪರಮಸುಖವೆಂದಿರಬೇಡಿ । ಮುಂದಿನಗತಿನೋಡಿ ॥ ಪ ॥ ಪ
ಶುಗಿಯುಮನವರುಗಳೆಯುವಾಗನಿಮ್ಮ । ಇದರಿಂದೇನುಪ್ರಯೋಜನ । ಜ
ಪರೇ ॥ ಅ ॥ ಜಿಹ್ವೋಪಸ್ಥಪರಾಯಣರಾಗುತ । ಬಹ್ವಾಶನರೆನಿಸಿ । ಗ

ಹ್ವರವೀಸಂಸಾರವೆಂದರಿಯದೆ । ಗಾಡಿಗಳ್ಳೀಳುತಗತಿಶೂನ್ಯರಾಗಿ ॥ ೧ ॥ ಸಾಲವಮಾಡುತಸತಿಸುತರನುಪರಿ । ಪಾಲನಗೈಯುತಲೀ । ಲೋಲರು ತಾವೆಂದರಿಯುತಮದ್ದದಲಿ । ಮೇಲೆದೈವಕಾಭಮಾಡುವಬಿನ್ನುತ ॥ ೨ ॥ ಆಟ ಪಾಟವಲಿಕಾಲವಕಳೆಯುತ । ಪ್ರೋಟಗಾರರಾಗಿ । ನಾಟಕಧರನಾಡಿಸು ತಿಹಬೊಂಬೆಯು । ಆಟವಿತನ್ನದೆಂತಿಗರ್ವದಿನೀವು ॥ ೩ ॥ ಎಷ್ಟುಜ ನ್ಮಗಳುಕಳೆದುಹೋಯಿತು । ಈಅಜ್ಞಾನದಲೀ । ಶಿವಗುರುಬೋಧಿಸೆಯು ಪಹಾಸಿಸುತಲಿ । ನಮ್ಮಜ್ಞಾನವೃಕ್ಷಣರಾಗುತನೀವು ॥ ೪ ॥ ಕಾಪು ಕೋಪದೊಳೀಜುತಶ್ರೀಗುರು । ರಾಮವಿಠಲಯನ್ನದೆ । ತಾಮಸರೊಳ ಗಗ್ಗೀಸರರಾಗುತ । ಕೋಮಲಾಂಗಿಯರಸೊಬಗಿಗೆಹಿಗ್ಗುತ ॥ ೫ ॥ ॥ ೧೦೩ ॥

ರಾಗ ಬೇಗಡೆ ತಾಳ ಅಟ.

ಬೊಂಬೆಆಟಗಳಆಡಿಸುವನುಪರಮಾತ್ಮ । ಭಾರಕರ್ತನುನಮ್ಮನು । ಯಾವಾಗಲು ॥ ಪ ॥ ತುಂಬಾತೋಷದಲಿಯಹಂ । ಭಾವದಲಿ ನಾವು । ಬೆಂಬಿಡದಸಂಸಾರಹಂಬಲೊಳಿರುವೆವು ॥ ಅ ॥ ಜೀವರನಂತ ಕೋಟಿಗಳಂತಿವನಲ್ಲಿ । ಯಾವಾಗಲುನಿತ್ಯರಂತೆ । ಕಾವನುತಾನಂತೆ ಕರ್ಮಅನಾದಿಯಂತೆ । ಭಾವಿಸಿನೋಡೆ । ಕೃತ್ಯಾರ್ಥದಿತಿಳಿವದು ॥ ೧ ॥ ತಾನುತನ್ನವರೊಡಗೂಡಿಯಲ್ಲರಹೃದಯ । ತಾಮರಸದೊಳಿರುತ । ಧ್ಯಾನಕ್ಕೆಯುಪರವರಧಿಕಾರದನುಸಾರ । ತಾನೆಪ್ರೇರಿಸುತವಕದಿನಡೆಸುವ ॥ ೨ ॥ ಮಾಯೆಯೆಂಬುವಳೊಬ್ಬತಾಯಿ । ಇವರಿಗೆಲ್ಲ । ಮಮತೆಹಂಕಾರಗಳ । ಕಾಯಾಭಿಮಾನವಕೊಟ್ಟುಕೆಲಬರಿಗೆ । ಬಾಯ್ಬಾಯ್ಬಿಡಿಸುತಬಾಧಿಸುತಿಹಳಂತೆ ॥ ೩ ॥ ಕೆಲವರುಧರ್ಮಾರ್ಥಕಾಮಗಳಿಗೋಸುಗ । ಹಲವು ಕರ್ಮಗಳಮಾಡಿ । ಫಲಗಳಪೇಕ್ಷಿಸಿ । ಜನನಮರಣವೆಂಬಜಲಧಿಯೊಳಗೆಬಿದ್ದುಕೊನೆಗಾಣದಿರುವರು ॥ ೪ ॥ ಒಂದಕೊಂದಿಷ್ಟುಚ್ಚಕಡಿಮೆಯಾಗಿಮನಸಿಗೆ । ಸಂದೇಹಗಳುತೋರಿ । ಹಿಂದುಮುಂದರಿಯದೆಅಧಿಕರುನಾವೆಂದು । ಮಂದಬುದ್ಧಿಯಿಂದಮರಳೋಗುವರುನಿಜವ ॥ ೫ ॥ ಯಾರಿಗೂತಿಳಿಯಗೊಡದೆವೊಳಹೊರಗೆವಿ । ಹಾರಿಸುತಲಿಸರ್ವದಾ । ಮಾರಮಣನುತಾನುಕಾಣದುಕಾಣಿಸುವನು । ಕಾರಣತಿಳಿಯಲುಕೇವಲಜಗಸದಳ ॥ ೬ ॥ ಆಬ್ರಹ್ಮಸ್ತಂಭಪರಿಯಂತಪ್ರಾಣಿಗಳೊಳು । ಶ್ರೀಭೂಮರೊಡನೆಗೂಡಿ । ಸ್ವಾಭಾವ್ಯಗುಣದಂತೆ । ನಡೆಸುತಿರುವಕೆಸಾಲ । ಸಾಧ್ಯಗಿ

ದರಫಲಲೇಶವಾಗುವದಿಲ್ಲ ॥ ೮ ॥ ಅಪಜ್ಞ್ಯಾಯಿಂದವೆಗ್ರಳಿಸಿದೆಂಬುವಶ್ರುತಿ । ಲೇಸಾಗಿಪನವರಿತುದಾಸರಸಲಹುವಗುರುರಾಮವಿಠಲನ । ದಾಸರದಾಸ ನಾನೆಂಬುವನೇಧನ್ಯ ॥ ೯ ॥ ॥೧೦೮॥

ರಾಗಾ ಸುರಟಿ ತಾಳಾ ಆದಿ.

ಜ್ಞಾನಿಯಾಗಬೇಕು । ಮನದಅನುಮಾನವಬಿಡಬೇಕು ॥ ಪ ॥ ನಾನುನನ್ನದುಯೆಂಬುವದುಬಿಟ್ಟುಹರಿ । ನೀನೆಸರ್ವತ್ರದಿವ್ಯಾಪಕನೆಂದು ॥ ಅ ॥ ತಾಮಸರಿಗೆಬಾಧ । ಸಾತ್ವಿರಿಗೆನೇಮಪುಣ್ಯಲೇಪ । ಈಮಾನುಜರಿಗೆಲ್ಲಮಿಶ್ರವಾಗಿರುವದು । ತಾಮತತ್ತ್ವಮನಯಿನಾಮೂಪರೊಳೆಂದೂ ॥೧॥ ವಿಧಿತೃಣಾಂತವಾಗೀ । ಜೀವರುಮೊದಲುಕೊನೆಗಳಾಗೀ । ಯಿದರೊಳನಂತಾನಂತಕೋಟಿಗಳು । ವಿದಿತವಾಗಿಹದುಭ್ರಾಂತಿಸಮೂಹವು ॥ ೨ ॥ ಕೊಟ್ಟಸ್ವತಂತ್ರದಲೀ । ಜೀವರುಯಿಪ್ಪಾತ್ಯತಕೆಬಳಲೀ । ಯಿಟ್ಟಹಾಗೆ ತಾನಿರುತಜ್ಞಾನದಿ । ಧಿಟ್ಟತಾನೆನ್ನದೆತಿಳಿಯುತಸತತವು ॥ ೩ ॥ ಪೂರ್ವಕರ್ಮದಂತ । ನಡೆವದುಸರ್ವಕುಬಿಡದಂತೆ । ನಿರ್ವಹಿಸುವಧ್ಯಾನ್ಯಗೆನ್ನುತಚಿಂತಿಸಿ । ದುರ್ವ್ಯಸನದಿಮುಳುಗದೆಸಂತೋಷದಿ ॥ ೪ ॥ ಅವನಿಲ್ಲದೆಲೇಶ । ಕದಲದು । ತೃಣವುಕಾರಣಯಿನಾಕ । ತವಕತನ್ನತಂಣಿವೆವಾಕ್ರಪಲಿತ್ರಿ । ಭುವನಗಳಸೃಜಿಸಿಪಾಲಿಸಿಕೊಳುವನೂ ॥ ೫ ॥ ಅವನೆಲ್ಲಕುಕರ್ತ । ಅವನನುತಿಳಿದವನೆಕೃತಾರ್ಥ । ಯಿವರೆಲ್ಲರುಬರಿದೆಬಗುಳಲೇಕೆಹು । ದವನಿಯಲ್ಲನಗಗೀಡಹುದಲ್ಲದೆ ॥ ೬ ॥ ತನ್ನಯೋಗ್ಯತೆಯನ್ನು । ತಿಳಿಯದೆಅನ್ಯರನಿಂದಿಪನು । ತನ್ನಿಯಾಗಿಪರರನ್ನುದ್ಯೊಯ್ಯತನ್ನ । ಪುಣ್ಯಹಾನಿಯುಹುಡೆನ್ನುತಅರಿಯಾನು ॥ ೭ ॥ ವೇದಶಾಸ್ತ್ರವ್ರೋದಿ । ತದರ್ಥವಾಪಾಡಿಸುತಲಿಕಾದಿ । ಕೋದಡತಮಾದಸಮನ್ವಯವರಿಯದೆ । ವೋದಪುಟ್ಟುವದೆಯಂದಿಗಾದರು ॥ ೮ ॥ ಯೋನಿದ್ದರುಯಿವಗೇ । ವಂದುಸ್ವಾ । ಧೀನವಿಲ್ಲಜೀವಗೇ । ದೀನಬಂಧುಗುರುರಾಮವಿಠ್ಠಲನ । ಧ್ಯಾನಿಸಿಸರ್ವಸಮರ್ಪಣೆಮಾಡುತ ॥ ೯ ॥ ॥೧೦೯॥

ಇಂಗ್ಲೀಷು ಟಾಕ್ ಮಟ್ಟು.

ವಾರಿಧಿದಾಟಲುಬಹುದುಯಿನಾಸಂ । ಸಾರವದಾಟುವದಾರಳಿಶ್ಟೋ ॥ ಪ ॥ ಬಂಧುಗಳುಬಳಗಗಳು । ತಂದರೆಬಂದರೆಹಿಗ್ಗುವರು ॥ ೧ ॥ ವೇದದಲಿಭೇದಪಲಿ । ವಾದಗಳಹುವರೆಲ್ಲರಲೀ ॥ ೨ ॥ ಪಾಮರರುಯಿವರಿಗು

ರು । ರಾಮವಿಠಲಬಲ್ಲಹಾಹಾಹಾ ॥ ೩ ॥ ॥೧೧೯॥

ರಾಗ ಶಂಕರಾಭರಣ ತಾಳ ಆದಿ.

ಹೀಗಿದ್ದರೆಸಂಸಾರವೆಸುಖವು । ಇಹಪರಸಾಧನವು ॥ ಪ ॥ ಭಾಗವತರಚರಣಗಳಸೇವಿಸುತ । ಭಕ್ತಿಜ್ಞಾನವೈರಾಗ್ಯಬಲಿಸದಾ ॥ ಅ ॥ ಪ್ರತಿದಿವಸದಿಸತ್ಕಥೆಗಳಕೇಳುತ । ಪರಮನಿಷ್ಠೆಯಿಂದಾ । ಸತಿಸುತಹಿತಪಿತೃಮಾತೃಸಹೋದರರೊಂದೆಮಾರ್ಗದಿಂದ । ಬಿಡಿಯುಬಿಟ್ಟುಶಾಂತಿಯುಮಹಸುಖಲ । ಜ್ಞಾನವೆಂಬಬಂಧಾ । ಗತಕಲ್ಮಷರಾಗೆಲ್ಲವಾಗದೆ । ರತಮಟ್ಟಗೆಸಂತೋಷವೆಪಡುತ ॥ ೧ ॥ ಕಲಹವಿಲ್ಲದಿಹಸತಿಯಾಜ್ಞೆಯುಮೀ । ರದೆನಡೆಯುವಸುತರೂ । ಮಲಿನಹರಿಯುತಿಳಿಯಂಬತಂದೆನಿ । ರ್ಮಹವೃತ್ತಿಮಾತೆ । ಕಲಭೇದವನಾಡದಭ್ರಾತೃಗಳು । ಕೋರ್ಕೆಯುಳ್ಳಹಿತರೂ । ಛಲವಿಲ್ಲದಬಂಧುಗಳಿದ್ದರೆಮುಕ್ತಿ । ಸೋಪಾನವಿದಲ್ಲದೆಬೇರುಂಟೇ ॥ ೨ ॥ ಈಗುಣಗಳುಯಿಲ್ಲದಿರಲುತಾಡಿಗೆ । ಹೋಗುವದೇಲೇಸು । ಬಾಗಿಬಳಲಿಹಂಬಲಿಸುತಿವಗತನ । ಮಾಡಲುಫಲವೇನೂ । ತಾಗನೀರುಮುಳಿಗಿದಪರಿಣಾಮಾ । ಕಷ್ಟಪಡುತಲಿಹರೂ । ಶ್ರೀಗುರುರಾಮವಿಠಲವಲಿದರೆ । ಸಂಸಾರಿಯಾದರೇನಲ್ಲದಿರಲೇನೂ ॥ ೩ ॥ ॥೧೧೦॥

ರಾಗ ಶಂಕರಾಭರಣ ತಾಳ ಆದಿ.

ಜ್ಞಾನಿಗಿದ್ದರುಸುಖವೆ । ಜ್ಞಾನಿಯಾದವಗೆ ॥ ಪ ॥ ನಾಗಶಯನನಂಘ್ರಿ । ನಳಿನನಂಬಿರುವಗೆ ॥ ಅ ॥ ಬಂಧುಬಳಗವೆಲ್ಲಸಂದಣಿಯಾಗಿದ್ದರೂ । ಹಿಂದುಮುಂದಿಲ್ಲದೆ । ತಾನೊಬ್ಬನಾದರೂ ॥ ೧ ॥ ಹೊನ್ನುಹೆಣ್ಣುಮಣ್ಣುಹೊಂದಿಕೊಂಡಿದ್ದರೂ ॥ ಅನ್ನಕಿಲ್ಲದೆತಾನಲಿಯುವಂತಾದರು ॥ ೨ ॥ ಬೇಡದೆಸಕಲೈಶ್ವರ್ಯತಾನೆಬಂದರು । ಬೇಡಿದರೂಹೊಟ್ಟೆಕಂಬದೊರಕದಿದ್ದರೂ ॥ ೩ ॥ ಯೋಗ್ಯನೆನ್ನುತಜನರುಶ್ಲಾಘ್ಯವಮಾಡಿದರು । ಭಾಗ್ಯಹೀನನಿವನೆಂದುಬ್ಯೆಯ್ಯುತ್ತಲಿದ್ದರು ॥ ೪ ॥ ಕೊಟ್ಟದ್ದರಲ್ಲಿತೃಪ್ತಿಪಟ್ಟುಶ್ರೀಗುರುರಾಮ । ವಿಠ್ಠಲನಮನಮುಟ್ಟಿಭಜಿಸುವವಗೇ ॥ ೫ ॥ ॥೧೧೨॥

ಕೈಲಸಾರ್ವಭೌಮಬಾಲೆ ಮಟ್ಟು.

ತ್ಯಾಗಿಗೆಮುಕ್ತಿಯಾಗುವದು । ಶೋಗಿದರೇನುಫಲ ॥ ಪ ॥ ಯೋಗಪರಿತ್ಯಾಗನ್ನಲಿರುವ । ನಾಗಶಯನನನೋಡದೇ ॥ ಅ ॥ ಗುರುಸೇವೆಯ್ಯಾ

ಡಲಿಲ್ಲ । ಗುರುಶಾತಿಳಿಯಲಿಲ್ಲ । ಅರಿತೆನೆಂದುಹಾರಾಡುವ । ಅಹಂ ಕಾರಿಗಳಿಗೆ ॥ ೧ ॥ ವೇದಶಾಸ್ತ್ರೋದಲಿಲ್ಲ । ವಾದನಿಲ್ಲಿಸಲಿಲ್ಲ । ಬೋಧೆಮನಸಿಗೆಂಟಲಿಲ್ಲ । ಬುದ್ಧಿಕೊನ್ಯರೀಗೆಲ್ಲ ॥ ೨ ॥ ಜೀವಲ ಕ್ಷಣತಿಳಿಯದೆ । ದೇವರನ್ನುನಂಬದೆ । ಸಾವುನಮ್ಮದೆಂಬುದ.ಬಿಡದೆ । ಸಾ ವಕಾನ್ನಿಗಳಿಗೇ ॥ ೩ ॥ ಬಾಯಿಮಾತಿಲಿಂದಲೇನು । ಮಾಯಾವಾದಗಳೇ ನು । ನ್ಯಾಯಮಾರ್ಗಮರೆತವನು । ಕಾಯದಾಸೆಮಾಡನೂ ॥ ೪ ॥ ಗು ರುರಾಮವಿಠ್ಠಲನ । ಸ್ಮರಣೆಯಮಾಡದೆ । ಗರುವದಿಮೆರೆಯುವ । ದು ಕುಳನರರಿಗೇ ॥ ೫ ॥ ॥೧೧೩॥

ರಾಗ ನಾದನಾಮಕ್ರಿಯಾ ತಾಳ ಆದಿ.

ಈಪುರೊಳ್ಳೇದು । ನಮಗೀಯಾಪುರೊಳ್ಳೇದು ॥ ಪ ॥ ಜೀವ ಸಯೋಗ್ಯತೆಚನ್ನಾಗಿದ್ದರೆ । ದೇವರಕೃಪೆಸಂಪಾದರೆಸಾಕು ॥ ಅ ॥ ಯಂ ಬಾಆನೆಗಳಸಂಚರಿಸಿದರೆ । ಉಂಟಾದಕತೃಗಳಲ್ಲಿಸಿದರೆ । ತಂಟೆಮಾಳ್ಪ ಛಟಕೃವರಗೆದ್ದರೆ । ತಾನೆಲ್ಲಿದ್ದರುಭಯವಿಲ್ಲಣ್ಣ ॥ ೧ ॥ ಜಲಕೃಣಕಾ ಪೃಕೆವಸತಿಯಿಾಪುರು । ಬಲುಸಜ್ಜನಗಳನೆರೆಯಿಾಪುರು । ಫಲಗಳುಂ ಟುಮಾಡುವದೀಪುರು । ಹೊಲಗದ್ದೆಯುತೋಟಗಳಿಹಪುರು ॥ ೨ ॥ ಕೇ ಳಿದಪದಾರ್ಥದೊರೆಯುವಪುರು । ವೇಳೆಗೆಅನುಕೂಲವುಯಿಾಪುರು । ತಾಳಮೇಳವಾದ್ಯಗಳಿಹಪುರು । ಸೂಳೆಬೋಕರಿಗೆಳಮೃದಪುರು ॥ ೩ ॥ ಯಾಷ್ಟುಪುಣ್ಯದಿಂದೀಪುರಿಗಬಂದು । ಕಷ್ಟಪಡುವನರಭ್ರಷ್ಟನಲ್ಲವೇ । ಮುಷ್ಟಿಯತಾತ್ಯದರುಪಡಲನುಹೊರೆಯುತ । ಮೂರೂಬಿಟ್ಟುತಿರುಗು ವಜನರಿಗೆ ॥ ೪ ॥ ಮರಕ್ರಿಮಿಪಕ್ಷಿಗಳಲಿಬಾರದೆಯೀ । ನರಜನ್ಮವೆಂಬಪು ರಿಗೆಬಂದು । ಗುರುರಾಮವಿಠ್ಠಲನಕರುಣವಪಡದರೆ । ಕರಕಲಾಮಲಕ ವಿದುಕೈವಲ್ಯಕೆ ॥ ೫ ॥ ॥೧೧೪॥

ರಾಗ ತೋಡಿ ತಾಳ ರೂಪಕ.

ಧ್ಯಾನಿಸುವಸುಜನರಿಳೆಯೊಳೇನೂಧನ್ಯರೊ ॥ ಪ ॥ ಶ್ರೀನಿಧಿನಮ್ಮ ನಾರಾಯಣನಚರಣಕಮಲವ ॥ ಅ ॥ ಬ್ರಂಹ್ಮರುದ್ರಪ್ರಮುಖಸುರರಿಗೇ ಮೂಮೂಲವೂ । ಸಮ್ಮತಿವೇದಶಾಸ್ತ್ರಪುರಾಣವೇನುಹೇಳ್ವದೊ ॥ ೧ ॥ ಕಾಲಕರ್ಮಜೀವಮಾಯಾಯುಹಾರಧೀನವೂ । ಮೇಲೆಅನುಭವದಲಿತಿಳಿವದ ದುಮಜ್ಞಾನವೂ ॥ ೨ ॥ ಅರ್ಥಚತುಷ್ಟಯವಕೊಡುವಪದಾರ್ಥಸಾರಥಿ ॥

ಶತಾರ್ಚಭೋಕ್ತಾ ಗುರುರಾಮವಿಠಲಮಾರಾತ್ರೆ ॥ ೩ ॥ ॥೧೧೫॥

ರಾಗ ಸುರಟಿ ತಾಳ ಆದಿ.

ಅಂಟಿ ಅಂಟದಹಾಗೆಯಿರಬೇಕು ॥ ಪ ॥ ದುರಾತಂಟ ಸಂಸಾರದ ಬುದ್ಧಿ । ಪ್ರುಂಟಾದವರಿಗೆಲ್ಲ ॥ ಅನು ॥ ಯೆಂಟುಮದಗಳನ್ನು ಬಿಡಬೇಕು । ಹದಿನೆಂಟನೇ ತತ್ವ ತಿಳಿಯಬೇಕು । ಮೂರೆಂಟು ಜಯಿಸಿ ನಿಜ ನೆಂಟನ ಕಂಡವನ । ಭಂಟನಾಗಿ ವೈಕುಂಠಕೇರುವದಕೆ ॥ ೧ ॥ ಶತ್ರುಗಳಾರ್ವರ ಗೆಲ್ಲಬೇಕು । ನಿಜ । ಮಿತ್ರರಾರ್ವರೊಳು ನಿಲ್ಲಬೇಕು । ರಾತ್ರಿ ಹಗಲು ಪತ್ನೀಪುತ್ರರೊಡನೆ ಕಮಲ । ಪತ್ರದ ನೀರಿದ್ದ ರೀತಿಯಿಂದಲಿ ತಾನು ॥ ೨ ॥ ಮಾನಾಪಮಾನ ಸಮ ದಾಗಬೇಕು । ಅನು । ಮಾನವಿಲ್ಲದೆ ತಿರುಗಲಿಬೇಕು । ಇನ್ನೇನಾದರು ಗುರುರಾಮವಿಠ್ಠಲನಾ । ಧ್ಯಾನವೆನುತ ಮದ್ದಾನೆಯುಂಡಿತಾನು ॥ ೩ ॥ ॥೧೧೬॥

ರಮ್ಮನವೇಸಾಮಿನೀ ಮಟ್ಟು.

ಮಂದಮತಿಯೋ ಮಾನವಾ ॥ ಪ ॥ ಹಿಂದೆ ಮುಂದೆಯೆಂದು ಯೋಚಿಸದಿರು ॥ ಅನು ॥ ಶ್ರುತಿ ತಾಳಂಗಳ ಗತಿ ಅನುಸರಿಸುತ । ಸತತ ವುಲಕ್ಷ್ಮೀಪತಿಯ ಭಜಿಸು ॥ ೧ ॥ ದೇವರನಾಮವೆ ಜೀವನವೆನ್ನುತ । ಭಾವದಿ ತಿಳದ ತಿಭಕ್ತಿಯೊಳಿರು ॥ ೨ ॥ ಯಾಚರಾಚರರು । ಗೋಚರಿಸುವ ಕಂಜ । ಲೋಚನನೆಂದು ನಿನ್ನ । ನಾಚಿಕೆ ಬಿಡು ॥ ೩ ॥ ದುರಭಿಮಾನ ಬಿಟ್ಟು । ಹರಿಹರಿಯೆನ್ನುತ । ಕೊರಳು ನೋಯುವಂತೆ । ಕೂಗುತಲಿರು ॥ ೪ ॥ ಪರದಲಿ ಮುಕ್ತಿಯು । ಇಹದಲಿ ಸೌಖ್ಯವು । ಗುರುರಾಮವಿಠಲನೆ । ಕರುಣಿಸುವನು ॥ ೫ ॥ ॥೧೧೭॥

ರಾಗ ಧನ್ಯಾಸಿ ತಾಳ ಆದಿ.

ಭಜಮನಗೊಂಜಾನರಕುಂಹ್ಮಭಜ ಮಟ್ಟು.

ಬಿಡುಬಿಡು ಮನದ ಸಂಶಯವನು ॥ ಪ ॥ ನಡಿನಡಿಸಿಡಿಯೋ ಗುರುಪಾದವನು ॥ ಅ ॥ ಶ್ರವಣ ಮನನ ಧ್ಯಾನ । ಶಾಸ್ತ್ರಾನುಸಂಧಾನ । ಯಮವೆ ಮಾತ್ರವ್ಯತ್ಯಾಸ । ವಿಲ್ಲದಿರು ॥ ೧ ॥ ಯೋಗ್ಯತಾನುಸಾರ । ಭಾಗ್ಯ ಬರುವದದು । ಶ್ಲಾಘ್ಯವೆನ್ನುತ ದಾಸನಾಗಿರು ॥ ೨ ॥ ಯಿರಡು ಸುಖಗಳನ್ನು । ಗುರುರಾಮವಿಠ್ಠಲನೇ । ಕರುಣಿಸುವನು ಯಿಂ । ದರಿತಾನಂಬು ॥ ೩ ॥ ॥೧೧೮॥

ಇಂದಜನ್ಮಂವೇಂಡಾಂ ಮಟ್ಟು.

ಯೇನುಸುಖವೈಯ್ಯ ॥ ಪ ॥ ಯಿನ್ನೇನುಪರಗತಿಯುಪಡುವುಂದೆ ॥ ಅ ॥ ನಾನಾವಿಧದುಃಖಗಳಲಿ । ನರಳುತಹಗಲಿರುಳೆನ್ನದೆ । ಜ್ಞಾನಶೂನ್ಯನಾಗುತವಿಷ । ಯಾನಭವದಿವ್ಯಥೆಪಡುವಗೆ ॥ ೧ ॥ ಮಾಳಿಗೆಮೇಲೊಡಾಟವು । ನಾಳೆಬಸುದುಃಖವೃಷ್ಟಿಯುಂ । ದ್ವೇಳುವಹಿರಿಯುರವಶಾತನು । ಕೇಳದೆಗರ್ವಿಸಿಮೆರವವಗೇ ॥ ೨ ॥ ನಿದ್ರಾಭೋಜನಮೈಥುನ । ಭದ್ರವೆಂತನಗೆಂದುತಿಳಿದು । ಕ್ಷುದ್ರಮಾರ್ಗದಲಿತಿರುಗಿದ । ರಿದ್ಧಿಹಂಬಲಿಸುವವಗೆ ॥ ೩ ॥ ಕಡುನಾರುವಹೊಲೆಗೂಡಿಸಲಿ । ಗೊಡವೆವಸ್ತ್ರದೇಕೆನ್ನುತ । ಮಡದಿಮಕ್ಕಳೆಂತೆಂಬುವ । ತೊಡರೊಳುಬಾಯ್ಬಿಡುತಿರುವವಗೇ ॥ ೪ ॥ ಹರಿಕೊಟ್ಟಮಹಾಭಾಗ್ಯದಿ । ಪರಮಾತ್ಮಭಕ್ತನಾಗಿರದಲೆ । ಗುರುರಾಮವಿಠಲನಮರ । ದಿರಳುಹಗಲುಚಪಲಪಡುವ ॥ ಯೇನುಸುಖವೈಯ್ಯ ॥ ೫ ॥ ॥೧೧೯॥

ರಾಗ ಹಿಂದೂಸ್ತಾನಿ ಅಟ.

ಯೆಂದಿಗೂಕಾಣೆಸುಖವು । ಜೀವಕೆ ॥ ಪಲ್ಲ ॥ ನೊಂದುಹಗಲಿರುಳು । ಹಿಂದುಮುಂದರಿಯದೆ । ಬಂಧಕದೊಳುಸಿಕ್ಕಿ । ಬಾಧೆಪಡುತಿಹದು ॥ ಅನು ॥ ಜನುಮಗಳೆಂಬುವದು । ಗಣನೆಗೆಸಾಧ್ಯವಲ್ಲ । ಜನರೂಥಿನೋಡಿದರೆ । ಕೊನೆಗಾಣುವದೇಯಿಲ್ಲ ॥ ೧ ॥ ಗರ್ಭಯಾತನೆಯುಂಟೊ । ದುರ್ಭರವಾಗಿಹದು । ನಿರ್ಭರದುಃಖಗಳು । ವಿರ್ಭೋಕವಾಗುಷೆದೂ ॥ ೨ ॥ ಬಾಲ್ಯದಿಪರಾಧೀನ । ಯುವ್ವನದಿಅಜ್ಞಾನ । ಬಾಳುವಕಾವಮೂರದಿ । ಬಹುಚಿಂತೆಯುನುದಿನ ॥ ೩ ॥ ಇದ್ದರುದುಃಖವೆಯಿಲ್ಲ । ದಿದ್ದರೂದುಃಖವೆ । ಬದ್ಧಸಂಸಾರಕೆ । ಮದ್ದುಮಾಡುವರಾರು ॥ ೪ ॥ ಯಾವವಸ್ಥೆಗಳಲ್ಲಿ । ಜೀವಗೆಸುಖವಿಲ್ಲ । ಶ್ರೀವರಗುರುರಾಮ । ವಿಠಲನೊಬ್ಬನೆಬಲ್ಲ ॥ ೫ ॥ ॥೧೨೦॥

ರಾಗ ಶಹಾಣ ತಾಳ ರೂಪಕ.

ಮರುಳುಮನುಜಹರಿಯಧ್ಯಾನಿಸೋ । ಸ್ಥಿರವಿಲ್ಲವೀದೇಹ ॥ ಪ ॥ ಬರಿದೆಹೊನ್ನುಮಣ್ಣಿಗಾಗಿ । ಪರಂಕೇವಮಾಡಿನೊಂದು । ಇರುಳುಹಗಲುವ್ಯರ್ಥವಾಗಿ । ಕರೆಕರೆಯನುಪೊಡುವೆಯಾಲೆಂ ॥ ಅ ॥ ಕಂಡೆತಾಯಿಸತಿಯುಸುತರು । ಬಂಧುಬಳಗಗಳಾರಿದ್ದರು । ಮುಂದಿನಕರ್ಮತಪ್ಪಿಸಲ್ಕಿ

ರು । ಸಂದೇಹವಿಲ್ಲೆಂದೂತಿಳಿದು ॥ ೧ ॥ ಧನವಸಂಪಾದಿಸುವವರಿಗೂ । ಜನರುನಿನ್ನಸೇರುತಿಹರು । ಕೊನಿಗೆಯಾರುದಿಕ್ಕುಕಾಣೆ । ಕೋರಿಕೆಯಾಂಬಿಟ್ಟುಸಕಲ ॥ ೨ ॥ ಗುರುರಾಮವಿಠಲನಂಘ್ರಿ । ಸ್ಮರಿಸಿಸ್ಮರಿಸಿಹರುಷಪೊಂದಿ । ಪರಮಸುಖವಪಡಿಯದೆ । ಪಾಪಿಯೆನ್ನಿಸಿಕೊಳ್ಳಬೇಡವೊ ॥೩॥

॥೧೨೧॥ ಶ್ರೀವಾಸುದೇವಲಾಲಿ ಯಂಬ ಮಟ್ಟು.

ನರದೇಹನಿತ್ಯವಲ್ಲ । ನಾಳೆಮ್ಮಾಕ್ಯಬಿಡುವದಲ್ಲ ॥ ಪ ॥ ಮರುಳುಮನವೇಕೇಳುಸೊಲ್ಲ । ಹರಿಯುಮರೆವದುಚಿತವಲ್ಲ ॥ ಅ ॥ ಹಿಂದಿನವರುಪಟ್ಟಪಾಡು । ಇಂದುನೀನುತಿಳಿದುನೋಡು । ಸಂದೇಹಗಳಾಡಾಡು । ಬಂದೀಮನದಿಹರಿಯಕೊಂಡಾಡು ॥ ೧ ॥ ಹರಿನಮಗೆನಾದಿಮಿತ್ರ । ಪರಶೋಭನಚಾರಿತ್ರ । ನಮ್ಮಪೊರೆವದೇಸುಚಿತ್ರ । ಕರುಣಿಸುವನುಕಮಲನೇತ್ರ ॥ ೨ ॥ ಹೊನ್ನುಹೆಣ್ಣುಮಣ್ಣುಮೂರು । ನಿನ್ನದೆಂದುಹಿಗ್ಗದಿರು । ಜನ್ಮಜನ್ಮವೆತ್ತಿದರು । ಬೆನ್ನುಡೆವರುಯಮನವರು ॥ ೩ ॥ ಯಾಕೆಪಡುವೆವ್ಯಥಾಯಾಸೆ । ಯೇನುಸುಖವು । ಕಾಣೆಲೇಶ । ಜೋಕೆಬಿಡುಬಿಡುದುರಾಶಾ । ಬೇಕು । ಸುಜನರಸಹವಾಸ ॥ ೪ ॥ ಕರಿಯುಕೂಗೆಭರದಿಬಂದ । ಕರುಣಿಕರೆಯೆಅಕ್ಷಯವೆಂದ । ಹರಿಕೊಡುವನುಆನಂದ । ಗುರುರಾಮವಿಠಲಮುಕುಂದ ॥ ೫ ॥ ॥೧೨೨॥

ರಾಗ ಹಿಂದೂಸ್ತಾನಿ ಕಾಪಿ ತಾಳ ಆದಿ.

ಯಂದಿಗೆಬಿಟ್ಟೀಕುಯಿಕ್ಕಾಯಕಾಶೆ ॥ ಪ ॥ ಕಂದಿಕುಂದಿಕೊರಗುವೆಮನಸೇ । ನಿನ । ಗೆಂದಿಗೆ ॥ ಅ ॥ ಸಾರವಿಲ್ಲದಸುಖಗಳಕೋರಿ । ಸಂ । ಸಾರವೆಂಬುಚಕ್ರದಿಸೇರಿ ॥ ೧ ॥ ಯಷ್ಟುಬಂದರುಸಾಲದುನಿನಗೆ । ಯಿಾ । ಕಷ್ಟದಿಂದೇನುಕಾಣುವೆಕೊನೆಗೆ । ನಿನ । ಗೆಂದಿ ॥ ೨ ॥ ಹಿರಿಯರಾಡುವಮಾತಕೇಳದೆ । ಗರ್ವಹಂಕಾರಗಳಂಮರದೆ ॥ ೩ ॥ ಅದುಯಿದುಬೇಕೆಂದಪೇಕ್ಷಿಸುವೆ । ನಿನ್ನ । ಮೊದಲರಿಯದೆವ್ಯಥಾಯೋಚಿಸುವೆ ॥ ೪ ॥ ಗುರುರಾಮವಿಠಲನನೆರೆನಂಬುತ । ಪರಮಸುಖವಪಡುನೀಸತತ ॥ ೫ ॥

॥೧೨೩॥ ದೂರಿಗೆಪಾಗುರಿಯಾಡಿನಲ್ಲಿ ಮಟ್ಟು.

ಯಾತಕೆಸಂಕಟಪಡುಚಿಂತಿಸುವೆ ॥ ಪ ॥ ಕೋತಿಗೆಮದ್ದಿಕ್ಕಿದ । ರೀತಿಬಿಮನವೆನೀ ॥ ಅ ॥ ಹಾನಿವೃದ್ಧಿಗಳು । ತಾನಾಗಿಬರುವದು । ಯೇನೇಮಮಾಡಲುಬಿಡಲೊಲ್ಲದು । ಜ್ಞಾನವಿಲ್ಲದೆವ್ಯಥಾ । ಧೇನಿಸಿಧೇನಿಸಿ ॥೧॥

ದೇಹಸಂಬಂಧಿಗಳ । ಮೋಹಪಾಶಕ್ಕೆಸಿಕ್ಕಿ । ಸಾಹಸಿಸಿಗಾಡುವಬೇನುಫಲ । ಊಹಿಸಿನೋಡಲುಭ್ರಾಂತಿಯಿದಲ್ಲವೆ ॥ ೨ ॥ ಸರ್ವಪ್ರಾಣಿಗಳನುಸೃಷ್ಟಿಸಿಯಿರುವವನು । ಸರ್ವಕರ್ಮಸಂಚಾರನಡೆಸುವವನು । ಗರ್ವವಿರಹಿತನು । ಗುರುರಾಮವಿಠಲನು ॥ ೩ ॥ ॥೧೩೮॥

ರಾಗ ಕಮಾಜು ರೂಪಕ ತಾಳ.

ಯುಕ್ತಿಕರ್ಮಮಾಡುವರಿಗೆಮುಕ್ತಿಯೇಫಲ ॥ ಪ ॥ ಶಕ್ತರಾದ ಸಜ್ಜನರಿಗೆ । ಶಾಂತಿಯೆಬಲ ॥ ಅ ॥ ಆರ್ಯರಪಥಹಿಡಿದು । ಕಾರ್ಯಕಾರಣವರಿದು । ಸೂರ್ಯಮಂಡಲದಲಿಮೆರವ । ನಾರಾಯಣನಂಭಜಿಸುತ್ತ ॥ ೧ ॥ ವೇದಶಾಸ್ತ್ರನೋಡಿ ॥ ವಾದವಾದಗಳೀಡಾಡಿ । ಬೋದವೇಹಸವಿವೆಂದರಿತು । ಸಾಧನಾನುಷ್ಠಾನದಿಂದ ॥ ೨ ॥ ಕಾಮಕ್ರೋಧಬಿಟ್ಟು । ನಿತ್ಯ । ನೇಮದಿಮನವಿಟ್ಟು । ತಾಮಸಗುಣವಿಲ್ಲದೆ । ಗುರುರಾಮವಿಠಲನನಂಬಿ ॥ ೩ ॥ ॥೧೩೯॥

ರಾಗ ಅಯೋಧ್ಯ ವಿಭೂಷಣನನ್ನು ಮಾರಣಿನೆ ಮಟ್ಟು.

ಭಕ್ತಿವೆಂದೇಕಾರಸಜ್ಜನರಿಗೆ । ಕಾ । ಯುಕ್ತಿಯಾತಕೆಹಲವು ಬಗೆ ॥ ಪ ॥ ಭಕ್ತಿಯೊಂದಿದ್ದರೆಭವಗಳುಬಂದರು । ರಕ್ತಿಪುಟ್ಟದುದು ವಿಷಯದೊಳು । ಶಕ್ತರಾಗಿಹಅಧಿಕಾರಿಗಳಿಗೆ । ಕಾ।ಯುಕ್ತಿಯಾತಕೆ ಹಲವುಬಗೆ ॥ ಅ ॥ ಯೇನೇನುಮಾಡಲುಶ್ರೀನಿವಾಸನಸೇವೆ । ದೀನರುನಾವೆಂದುದಿನದಿನದೀ । ನಾನುಯೆಂಬುದುಬಿಟ್ಟರುವರಿಗೆಕಾ।ಯುಕ್ತಿ ॥ ೧ ॥ ಆಶೆಯುಯಿಲ್ಲದೆವಿಶ್ವಾಸಲುಮನದಲಿ । ಶ್ರೀಶನಪದವನುಚಿಂತಿಸುತ । ಲೇಸಾದದಾರಿಯೊಳ್ನಡಿಯುವರಿಗೆಕಾ।ಯುಕ್ತಿಯಾತಕೆ ॥ ೨ ॥ ಹರುಷಶೋಕಗಳೊಂದೇಸಮವಾಗಿತಿಳಿದು । ಪುರುಷಪ್ರಯತ್ನಗಳನುಮರೆದು । ಗುರುರಾಮವಿಠಲನಸ್ಮರಿಪರಿಗೆಕಾ।ಯುಕ್ತಿಯಾತಕೆ ॥ ೩ ॥ ॥೧೪೦॥

ಚಿನ್ನಹಾನರಾ ಮಟ್ಟು.

ಧನ್ಯನಾದೆನೋನಾಂ ॥ ಪ ॥ ಘನ್ನಮಹಿಮಶ್ರೀನಿವಾಸ । ಕರುಣದಿಂದವಲಿದನಿನ್ನು ॥ ಅ ॥ ದೇಶದೇಶದಿಂದಸಕಲ । ದಾಸಜನರುಬಂದುನಿದಾ । ಶ್ರೀಶನಲಹೆಂದುಕೂಗುವ । ಘೋಷಕೇಳಿಕರ್ಣಗಳಿಂ ॥ ೧ ॥ ಧಾರ್ತರಾಷ್ಟ್ರವೈರಿವಿನುತ । ಪ್ರಾರ್ಥಿಸುವರಭೀಷ್ಟಕೊಡುತ । ತೀರ್ಥಪ್ರಸಾದಗಳನೂರಿಸಿ । ಅರ್ಥಬೆಳಸುವವನಕಂಡು ॥ ೨ ॥ ರಥವನೇರಿದ

ದ್ಯಾವತಿ । ಪತಿಯುಬರುವದರಿತುಜೀವ । ಸತಿಯರೆಲ್ಲವಾತ್ತಿನಾ । ರತಿ ಯುಬೆಳಗುವದನುಕಂಡೂ ॥ ೩ ॥ ಸಂತಸದಿಮುಹಂತರುಶ್ರೀ । ಕಾಂತನ ಗುಣಂಗಳಸಿಪ್ರೊಗಳಿ । ಸ್ವಾಂತನಿರ್ಮಲರಾಗಿಭಜಿಪ । ಅಂತರಾತ್ಮನನಕಂ ಡು ॥ ೪ ॥ ಭೂಮಿಗಧಿಕಶೇಷಗಿರಿ । ಧಾಮಪೂರ್ಣಕಾಮಭಕ್ತ । ಸ್ತೋ ಮವನ್ನುಪಾಲಿಪಗುರು । ರಾಮವಿಠಲನ್ನಕಂಡು ॥ ೫ ॥ ॥೧೭೭॥

ರಾಗ ಮೋಹನ ತಾಳ ಆದಿ.

ಬೇಡಿಬೇಡಿಬೆಂಡಾದರೆನಿನಗೇ । ನೀಡುವರೂಮತ್ಯಾರಿಲ್ಲಾ ॥ಪ॥ ಬೇಡದಿರುವಸಜ್ಜನರಡಿಗಳಕೊಂ । ಡಾಡುತಲಿರುನೀಹಗಲಿಲ್ಲಾ ॥ ಅ.ಪ.॥ ಕಾಸಿನಾದರುಹಿಡಿಕಾಳಾದರುಹರಿ । ದಾಸರಿಗೀಸೂಗಕೊಡಲಿಲ್ಲಾ ॥ ಲೇ ಸುದೊರೆವದೆಂದಾಗ್ರಾಡಿದರಾ । ಯಾಸವಲ್ಲದೇಫಲವಿಲ್ಲಾ ॥ ೧ ॥ ನಿನ್ನಂ ತೆಯೆಪರರನ್ನುನೋಡಿದಯೆ । ಯನ್ನುಅವರಲೀಯಿಡಲಿಲ್ಲಾ ॥ ಖಿನ್ನನಾ ಗಿನೀಬಾಯಿಬ್ಬಡುತಿದ್ದರೆ । ಮುನ್ನಿನಕರ್ಮವುಬಿಡದಲ್ಲಾ ॥ ೨ ॥ ಭೆಳ ಸಿಭೆಳಸಿಗಂಟಾಗ್ರಾವೆಯಲ್ಲದೆ । ತಿಳುವಳಿಕೆಯುಸ್ವಪ್ನದಲಿಲ್ಲಾ । ನೆಲದೊ ಳುಬಚ್ಚಿಟ್ಟರುತಿಹದ್ರವ್ಯವು । ಎಲೊನಿನಗದುಸ್ವಾಧೀನವಲ್ಲಾ ॥ ೩ ॥ ಸ ತ್ಪಾತ್ರದಿಅಣುಮಾತ್ರವುಕೊಟ್ಟರೆ । ವ್ಯಾಪ್ತನಾಗಿಪೆಚ್ಚುವದೆಲ್ಲಾ । ಆ ಪ್ತರುದಾರಾಪುತ್ರಮಿತ್ರರುನಿ । ನ್ನಾದರಿಸುವರೊಬ್ಬರುಯಿಲ್ಲಾ ॥ ೪ ॥ ಕಾಮಕ್ರೋಧದೊಳಗೆಮುಳುಗಿನೀ । ಕಂಡಕಂಡವರಕೋರುವೆಯಲ್ಲಾ । ಕ್ಷೇಮವೀವಗುರುರಾಮವಿಠ್ಠಲನೆ । ಕ್ಷಣವಾದರುನೆನೆಭಯವಿಲ್ಲಾ ॥೫॥ ॥೧೭೮॥

ರಾಜರಾಜಾಧೀಶಹರಿಶ್ಚಂದ್ರರಾಜನೆ ಮಟ್ಟು.

ಯೇನುಪೇಳಲೀಹರಿಯಚರ್ಯ । ಯಂತುಪೊಗಳಲೀ ॥ ಪ ॥ ಗಾನ ಲೋಲಜ್ಞಾನಪೂರ್ಣ । ಶ್ರೀನಿವಾಸನಾ ॥ ಅ ॥ ಬಲಿಯದಾನಬೇಡಿಬೆನ್ನೊ ಳು । ಭಾರಪೊತ್ತನಾ । ಜಲನಮಡುಹಿವೇದರಾಶಿ । ಯಜಗೆಯಿತ್ತ ನಾ ॥ ೧ ॥ ಧರಣಿಯೆತ್ತಿದೈತ್ಯನಶೀಳಿ । ತರಳಗೊಲಿದನಾ । ತರಧಿತೊಡ ಲಿಪಿಡಿದುಅಡವಿ । ಚರಿಸಿದಾತನಾ ॥ ೨ ॥ ಬೆಂಣೆತಿಂದುತ್ರಿಪುರಸತಿಯರ । ಬೆರಗುಮಾಡ್ದನಾ । ಪುಣ್ಯಪೂರುತಿಕಲ್ಕಿಗುರೂ । ರಾಮವಿಠ್ಠಲ ನಾ ॥ ೩ ॥ ॥೧೭೯॥

ಯಾವಶೀಮೆಬ್ರಾಹ್ಮಣ ಯಂಬ ಮಟ್ಟು.

ತತ್ವಚಿಂತನೆನಾಡುಮನುಜಾ । ವ್ಯರ್ಥಕಾಲಪುಕಳೆಯಬೇ ॥ಪ

ಮೃತ್ಯುಬರುವದುಮುಂದೆಕೇಳಿದು । ಮೂರುಬಾರಿಗೆಸಾರಿದೇ ॥ ಅನು ॥ ಮನೆಯುವುರಿಯುವಾಗಭಾವೀ । ಯನುತೆಗೆವನರನಂದದೀ । ಕೊನೆಗೆ ಯಮನವರೆಳೆವಕಾಲದಿ । ಕೋರಿದರೆಸುಖಬಾರದೂ ॥ ೧ ॥ ಯಿಷಣ ತ್ರಯದಾಸೆಯಿಂದಲಿ । ಮೋಸಹೋಗದೆಸಂತತಾ । ರೋಷದೋಷಕೆಕಾ ರಣವುಸಂ । ತೋಷದಿಂದಿರುನಲಿಯುತಾ ॥ ೨ ॥ ಯಲ್ಲಿನೋಡಿದರಲ್ಲಿ ಹರಿಯನು । ಸೊಲ್ಲುಸೊಲ್ಲಿಗೆತುತಿಸುತಾ । ಬಲ್ಲಹಿರಿಯರಕೇಳಿಸಂಶಯ । ವೆಲ್ಲಕಳೆದ್ದೃಢವಾಗುತಾ ॥ ೩ ॥ ನಾನುನನ್ನದುಯಂಬುವದುರಭಿ । ಮಾ ನವಿನಗೆಬೇಡೆಲೋ । ಸ್ವಾನುಭವಕಿದುಹಾನಿತರುವದು । ನೀನೆನಿನ್ನೊ ಳುನೋಡೆಲೋ ॥ ೪ ॥ ಪ್ರೇಮದಲಿಗುರುರಾಮವಿಠಲನ । ನಾಮಸ್ಮರ ಣೆಯುಮಾಡುತಾ । ಕಾಮನಾಟಕೆಮನವಸೋಲದೆ । ನೇಮಗಳನುಸರಿ ಸುತಾ ॥ ೫ ॥ ॥೧೩೦॥

ರಾಗ ಹಿಂದೂಸ್ಥಾನಿ ತಾಳ ಮಟ್ಯ.

ಅಭಿಮಾನವ್ಯಾಕೊಮಾನವಾ ॥ ಪ ॥ ಸಭೆಯದುಃಖದೊಳಿರುವಾ ದುರಭಿ ॥ ಅನು ॥ ನೀರಮೇಲಿನಗುಳ್ಳೆಯಂದದಿತೋರ್ಪಶ । ರೀರಭೋ ಗವೇಕ್ಷಿಸಿನಾನುನನ್ನದೆಂದೂ ॥ ೧ ॥ ಅನ್ನರಸದಿದೇಹ । ಅಧಿಕವಾಯಿ ತಲ್ಲಾದೆ । ತನ್ನನೇನುತಾಬಲ್ಲದೆ । ನಾನುನನ್ನದೆಂದು ॥ ೨ ॥ ವೂರಿನ ಜನಗಳು । ಹೊರಪ್ಯೈಣವಾಡಲು । ದಾರಿಗೆದಾರಿಯಾಹುದು । ನಾನುನ ನ್ನದೆಂದು ॥ ೩ ॥ ಶುಭಸಂತೋಷಗಳಪರೊಳುಕಾಣೆನು । ಯಿಭದಂತೆ ಮದವೇರುತಾ । ನಾನುನನ್ನದೆಂದೂ ॥ ೪ ॥ ಯಿದುಸ್ಥಿರವಿಲ್ಲಾ । ಯಿ ನ್ನೊಂದುತಪ್ಪುವದಲ್ಲಾ । ಪದರದೇನೀಕೇಳಿಸೊಲ್ಲಾನಾನುನನ್ನದೆಂ ದು ॥ ೫ ॥ ವೇದಶಾಸ್ತ್ರಪುರಾಣವ್ಯಾರಪೊಗಳುವದು । ಶೋಧನೆಮಾಡಿ ತಿಳಿಯದೆ । ನಾನುನನ್ನದೆಂದೂ ॥ ೬ ॥ ಗುರುರಾಮವಿಠ್ಠಲನು । ಗು ರುತಾಗಿರುವನೆಲೆ । ಯರಿತುಕೊಂಡವಧನ್ಯನುನಾನುನನ್ನದೆಂದು ॥ ೭ ॥ ॥೧೩೧॥

ಪಲಿಚಿತೆಯಿಂತಾಭೆಲವ್ಯಾಲ ಮಟ್ಯ.

ಕರೆಕರೆಯಿದುಸಂ । ಸಾರವತಿಘೋರ ॥ ಪ ॥ ಹರಿಯನುನೆರೆನಂ ಬಿ । ಪರಮಸುಖವಪೊಂದು ॥ ಅ ॥ ಚರಣಸೇವಕರಾ । ಪೊರೆವನುಶ್ರೀ ಧರಾ । ದುರಿತವುಪರಿಹರವಾಗುವದುಅಂಗಿಗೆಬೆಂಕಿಯಿಟ್ಟ । ತೆರನಾಹು ದುಮುಂದೆ ॥ ೧ ॥ ಯುಪ್ಪುಫೆಳಿಸಿದರುನೆಲದುಯಂದು । ತಪ್ಪವ

ಪಡುವೆಯೊಪ್ರತಿದಿನದೀ ॥ ಕೃಷ್ಣಗೆಪ್ರೀತಿಪಮಾಡು । ಶಿಷ್ಟರಂಘ್ರಿಯು ಬೇಡು ॥ ೨ ॥ ಸಂದೇಹವಿಲ್ಲದೆಗುರುರಾಮವಿಠ್ಠಲನಾ । ವಂದೇಭಕುತಿ ಯಿಂದಕೊಂಡಾಡೆಲೋ । ಅಂಧಪರಂಪರನೋಡಿದರೇಅಪಾರ ॥ ೩ ॥ ॥ ೧೩೨ ॥

ಕಾಮುನಿವಿರಕಮುಲಬಾರಕಿನೇ ಮಟ್ಟು.

ರಾಮನಾಮಸ್ಮರಣೆಯಮಾಡದೆನಿ । ಪಾಮರನಾಗದಿರೋ । ಮನು ಜಾ ಪಾಮರನಾಗದಿರೋ ॥ ಪ ॥ ಕಾಮಕ್ರೋಧದಿಂದಾ । ಕೆಟ್ಟರುಬಹು ಜನಾ । ತಾಮಸಗುಣಬಿಟ್ಟುಪ್ರೇಮದಿಂದಲಿನಮ್ಮ । ಸ್ವಾಮಿಯಸೇರೆನಂ ಬಿರೋ ॥ ಅನು ॥ ದೇಹವನಿತ್ಯವ್ರೋಮೋಹಪಡಬ್ಯಾಡವ್ರೋ । ಆಹಾ ಯಿದರೊಳುಸಾಹಸವೇನು । ಸುಖಲೇಶಕಾಣೆನು ॥ ೧ ॥ ತೊಗಲುಬೊಂ ಬೆಗಳಂತೆ । ನೆಗದಾಡುತಿರುವೆ । ಹಗರಣವಹವ್ಯಕ್ತಿಗಳನುನಂಬುತಾ ನಗೆಗೀಡಾಗದಿರೋ ॥ ೨ ॥ ಹೊರಗೊಳಗಿದ್ದುನಮ್ಮಗುರುರಾಮವಿಠ್ಠ ಲ । ಕರುಣಿಸುವನು । ಯೆಂದರಿತರೆಮುಕ್ತಿಯು । ಕರತಳವಾಗುವ ದು ॥ ೩ ॥ ॥ ೧೩೩ ॥

ರಾಗಾ ಶಂಕರಾಭರಣಾ ತಾಳ ರೂಪಕ.

ತಿಳಿಯದೆಕಾಲಕಳೆವರೆಮನವೆ ॥ ಪ ॥ ಖಲಜನಸಂಗದಲಿಸದಾ । ಕ ಲ್ಮಷಭಾಜನನಾಗುತ । ಜಲಧರಾನುಜನಶ್ರೀಪದಜಲಜಯುಗಳವಸುಜ್ಞಾ ನದಿ ॥ ಅನು ॥ ಇಂದ್ರಿಯಗಳಬಂಧಿಸಿಮನ । ಸೊಂದಾಗಿನಿಲಿಸಿವ್ರೊಳಗೆ ಮು । ಕುಂದನದರುಶನವಮಾಡದೆ । ಮಂದಬುದ್ಧಿಯಾಗಿನೀನು ॥ ೧ ॥ ಯಮನವರೋಡಿಬರುತನಿ । ನ್ನೆಳದೆಳದೊಯ್ಯುವ । ಸಮಯದಿ । ಭ್ರ ಮೆಯಿಂದಲ್ಲಿಕಾಲ್ಗೆರಗಲಬಿತ್ತುವರೆನಿನ್ನಮೂಢತನವೇ ॥ ೨ ॥ ತಾಮಸ ನಾಗುತಶ್ರೀಗುರು । ರಾಮವಿಠಲಕರುಣೆನ್ನದೆ । ಹೇಮಭೂಮಿಕಾಮಿನಿ ಯರ । ಕಾಮಿಸುತಲಿಸೊಕ್ಕುತನೀ ॥ ೩ ॥ ॥ ೧೩೪ ॥

ಮಾಣಿಕನಾಡಿಲೊಪ್ರಿಯಾ ಯಂಬ ಮಟ್ಟು.

ಕಳೆಯಬ್ಯಾಡವ್ರೋಕಾಲ ॥ ಪ ॥ ಹಲವುವಿಧದಲಿಚಂಚಲಪಡುತಲಿ ತತ್ವ । ತಿಳಿಯದೆನೀಕಾಲ ॥ ಅನು ॥ ಯೀನರಜನ್ಮವು । ನಾಳೇಬಾರ ದುಕೇಳೊಜ್ಞಾನಿಯಾಗದೇಕಾಲ ॥ ೧ ॥ ಹೇಯಸುಖವುಕೋರಿ । ನ್ಯಾ ಯಬಿಟ್ಟುನಡಿಯೆ । ದಾಯತಪ್ಪುವದುಕಾಲ ॥ ೨ ॥ ಗುರುರಾಮವಿಠ್ಠ ಲನಗುರುತರಿಯದೆ । ಬರಿಜಾರರಕರೆಯಲೀಕಾಲ ॥ ೩ ॥ ॥ ೧೩೫ ॥

ರಾಗ ಹಿಂದೂಸ್ಥಾನಿ ಕಾಫಿ ತಾಳ ಆದಿ.

ಮಾನಸವೇ ಮರುಗದಿರೈ ॥ ಪ ॥ ದೀನನಾಗಿ ಸದಾ ಹೀನರ ಬೇಡು
ತ । ನಾನು ನನ್ನದೆಂಬಭಿಮಾನದಲಿ ॥ ಅ ॥ ಹೊಟ್ಟೆಗೋಸುಗ ಪರ । ರಿ
ಷ್ಟ್ಯಾನುಸಾರದಿ । ಕೆಟ್ಟ ನುಡಿಗಳನು ನುಡಿಯುತಲಿ ॥ ೧ ॥ ಸಾವು ಕಪ್ಪ
ದುಮ್ಮಾಂದಿ । ಭಾವಿಸಿನೋಡದೆ । ಜೀವನಕ್ಕಿಲ್ಲದೆನಿ । ಜೀವಿನಾನೆಂ
ದೂ ॥ ೨ ॥ ದುಷ್ಟರವೋಲಗ । ಕೆಟ್ಟ ಭೂಮಿಯು ಬೆಳೆ । ನಷ್ಟವಾ
ಗೋದಲ್ಲದೆ । ಲಾಭವುಂಟೇನೋ ॥ ೩ ॥ ಹರಿಕೊಟ್ಟ ಭಾಗವು । ಪರಿಪೂ
ರ್ಣವಾಗಿರೆ । ದುರುಳರ ಬೇಡುವರೆ ಕರೆಕರೆಯಾಕೆ ॥ ೪ ॥ ಹಿರಿಯರು ಪೇ
ಳಿದ । ಪರಮ ಬೋಧೆಯಿಂ ಪಾ । ಗುರುರಾಮವಿಠ್ಠಲನ । ಚರಣವ ನಂಬದೆ ॥ ೫ ॥
॥ ೧೩೬ ॥

ರಾಜಾಬಹದೂರಯೆಂಬ ಮಟ್ಟು.

ಯೇನಿದು ಮನವೆ । ಹೀನ ವಿಷಯಗಳ । ನೀನೇಕಾಮಿಸಿ । ನಿರುತವು ಕೆ
ಡುವೆ ॥ ಪ ॥ ಪರರಂಕೆಯಿತಾ । ನಿರಬೇಕೆನ್ನುತಾ । ಸ್ವರೂಪವರಿಯ
ದೇನೀ । ಕರೆಕರೆ ಪಡುವೆ ॥ ೧ ॥ ನಿಂಕಲಿನಿಲ್ಲದೆ । ಚಿಂತಿಸುತ ನುದಿನ ।
ಭ್ರಾಂತಿಯ ಪಡುತಲಿ । ಬಾಯಿ ಬಾಯಿ ಬಿಡುವೆ ॥ ೨ ॥ ನಾಯಿಯಂದದಿ ಪ
ರ । ಸ್ತ್ರೀಯರ ಬಯಸುತ । ಹೇಯನೆನಿಸಿಕೊಂಡು । ನೋಯ್ಯುವೆಯ
ಲ್ಲದೆ ॥ ೩ ॥ ಮಲಮೂತ್ರದಿನೀ । ಮಲಗಿರಲಿಲ್ಲವೇ । ಮಲತು ಯವ್ವನಗ
ರ್ವ । ದಲಿ ತಲೆತೂಗುತ ॥ ೪ ॥ ಪರಿಪರಿವಿಧದಲಿ । ಭಕ್ತ್ರಂಪಾಲಿಪ । ಗು
ರುರಾಮವಿಠಲನ । ಚರಣವ ನಂಬದೆ ॥ ೫ ॥ ॥ ೧೩೭ ॥

ಸಾವಿರಾರೆಗತಿಯೆಂಬ ಮಟ್ಟು.

ಮನವೇ ಸದಾ ಚಿಂತಿಸು ಪದ್ಮನಜನಾಭನ ನಂಬದೆ । ಪ್ರೋಚಪಲವು
ನವೇ ॥ ಅನುದಿನ ನೀ ಮಾಳ್ಪ ಕಾರ್ಯವೆಲ್ಲವು । ಕೊನೆಗಾಣುವದೇನೋ ॥
ಫಲವೇನೊ ॥ ಅನು ॥ ಅಧಿಕನು ತಾನೆನುತ । ಅಸ್ಥಿರವಾದ ಪದವಿಗಳನು
ಕೋರುತ । ಮದಮತ್ಸರ ಕಾಮ ಕ್ರೋಧ ಲೋಭದಿ । ಮಮತಾಸ್ಪದನಾಗಿ
ಮರೆಥೋಗಿ ॥ ೧ ॥ ಗುರುಹಿರಿಯರನೋಡಿ । ವಂದಿಸಿದೆನೀ । ಮರುಳಾ
ಟಗಳಾಡಿ । ಪರರನಪಹಾಸಿಸಿ ಪಾಪಿಯಿವನೆನಿಸಿ ॥ ನರಕಕ್ಕೆಗುರಿಯಾಗುವೆ ।
ಪ್ರೋಚಪಲ । ಮನವೇ ॥ ೨ ॥ ವೇದಮಾರ್ಗವ ಬಿಟ್ಟು ಯಜ್ಞಾಮಾಗಲುದು ।
ರ್ವಾದಗಳನು ಕೊಟ್ಟು ಅದಿಯನುತಲಿ ಆನಾದಿಯೆನುತಲಿ ॥ ಅತಿಭಾಷೆಗಳಾ
ಡಿ । ಮದಗಡಿ ॥ ೩ ॥ ಶಕ್ಷತಿಳಿಯಬೇಕು । ಜ್ಞಾನಂಬೋಸಂ

ಪತ್ತಿನೊಳಿರುತಲಿ | ನಿತ್ಯಾನಿತ್ಯವಿವೇಕಶೂನ್ಯನಾಗಿ | ನಿ | ಕೆಡಬೇಡೆಲವೋಚಪಲಾ ॥ ೪ ॥ ಪರಿಪರಿಲೀಲೆಯಿಂದಾ | ತ್ರಿವಿಧಜೀವರೊಳಿರುವನುಪಮುಕುಂದ | ಗುರುರಾಮವಿಠಲನಿಜಚರಣರಿಗೆಲ್ಲ | ಪರಮಪಾಪವಿಈವಾದೇವದೇವಾ ॥ ೫ ॥ ॥೧೩೮॥

ರಾಗಾ ಕಲ್ಯಾಣಿ ತಾಳ ಅಟ.

ಮಾತುಆಡುವೆಯಾತಕೆ | ಮಾನವನೆನಿ | ಸೋತುಸುಮ್ಮನಿರು ಪೋಕೆ ॥ ಪ ॥ ಮಾತುಆಡುವೆಯಾಕೆ ॥ ಮಮತಾಅಹಂಕಾರದಿ | ಶ್ರೀಶರಣಿವರನ | ಶಿರಿನಾಮವಿಲ್ಲದ ॥ ಅನು ॥ ಕಾಯಅಸ್ಥಿರವೆನ್ನದೆ | ಯಿಂಪ ಪಂಚೆಸಲಾಯವಾಗುವದೇಮುಂದೆ | ನ್ಯಾಯತಿಳಿಯದೆಲಾ | ನ್ಯಾಯಾದಿ ಶೂಗುಳ | ಮಾಯಾವಾದಗಳಿಂದೆ | ಬಾಯಿನೋವಲ್ಲದೆ ॥ ೧ ॥ ವೇದಪುರಾಣವಲ್ಲ | ಶಾಸ್ತ್ರವೆಬ್ರಹ್ಮ | ವಾದವೇಮೊದಲೇಯಿಲ್ಲ | ಸಾಧನೆಯಂಬುವದು | ಲೇಶಯಿದರೊಳಿಲ್ಲ | ಪಾಪಿಸೋಕಲಗೂಡಿಪ್ರಾರ್ಥನನಾನೆಂದು ॥ ೨ ॥ ಗುರುಹಿರಿಯರನಿಂದಿಸಿ | ಬಾಯಿಗೆಬಂದಹರಟೆಹರಟೆಮೋಡಿಸಿ | ಪರಗತಿಚಿಂತೆಮಂಡೆಮಾತ್ರಪುರಾಣಹರಿಮನೀರೊಳುಬೋಧಿಸಾಕು ಮಂದದಿವ್ಯರ್ಥ ॥ ೩ ॥ ಪೊಂದಕೆಂಡಿಚ್ಚಸುತ | ಕುಪಕ್ಯವಾದದಿಂದಕಾಲವಕಳೆಯುತ | ಹಿಂದುಮುಂದರಿಯದೆಹಿತಾಹಿತಕಾಣದೆ | ನಿಂದಿಸಿಪರರಸ್ವಯೋಗ್ಯತೆತಿಳಿಯದೆ ॥ ೪ ॥ ಬಲ್ಲೆನಾಬಿಡುಯೆಂಬುವೆಸದಾಪ್ರೊಬ್ಬರಲ್ಲಿಡೋಷವಯಣಿಸುವೆ | ಫುಲ್ಲಲೋಚನಗುರುರಾಮವಿಠಲನಕಾಣ | ಲಿಲ್ಲಕೋಧಿಸಿತಿಳಿಯಲಿಲ್ಲಬರಿದೆಬಾಯಿರಾ ॥ ೫ ॥ ॥೧೩೯॥

ರಾಗಾ ಭೈರವಿ ತಾಳಾ ಅಟ.

ಅತ್ಯಾಶೆಪಡಬ್ಯಾಡಅಸ್ಥಿರಸಂಸಾರವಪುತ್ರನಾಗದಿರಲವೋ ॥ ಪ ॥ ಬತ್ತಿದಕೊಳದಂತೆಬರಿದಾಗುವದುಮುಂದೆ | ವೆಕ್ಯಸ್ತ್ಥಿತಿಯಿಂದಾ | ನಿತ್ಯಶರೀರವಿದು ॥ ಅ ॥ ಜನರಾಡುವದುಕೇಳಿ | ಮನಕೆಬಂದುದಕೋರಿ | ಅನುಮಾನಚಿತ್ತನಾಗಿ | ವನಿತೆಯರಬಲೆಯೊಳು | ಶಿಲುಕಿಮೋಹಭ್ರಾಂತಿ | ಮಳನಾಗಿಧರ್ಮಾಧರ್ಮಗಳತಿಳಿಯದೆ॥ನೀ ॥ ೨ ॥ ಹೇಯಸುಖವಬಯಸಿ | ಆಯಾಸಪಡುತಲಿ | ಬಾಯಿಬಿಡುತಾಸಕಲ | ನೋಯುತಾನುಡಿಯುತಕ್ರೋಧರೋಷದಿ | ಮುಳುಗಿ | ನಾಯಿಯಂದದಿ | ತಿರಿಗಿನಾನಾವಿಧದಲಿ ॥ ನೀ ॥ ೨ ॥ ದಾನಧರ್ಮಗಳಿಲ್ಲ | ಜ್ಞಾನವೈರಾಗ್ಯಗಳಿಲ್ಲ | ದ್ಯಾ

ನಷ್ಟವೇನುದಲೇಯಿಲ್ಲ । ಹೀನರಸಂಗದಿ । ಜಾಣರುಜಗೆಳಿನ್ನದೆ । ಮಾನಾ ಭಿಮಾನಅಜ್ಞಾನದಿಮುಳುಗಿನೀ ॥ ೩ ॥ ಪರರೊಡವೆಯತಂದು । ಪಡಲ ಜೋರೆಯುತಲ । ಬಾರೆಚಿಂತೆಯುಪಡುತ ॥ ಹರಿಕೊಡಲಿಲ್ಲೆಂದು । ದೈವ ವದೂರುತ । ನೆರೆಹೊರೆನೋಡಿ । ಅವರಂತೆನಾನಿರಬೇಕೆಂದತಾಪ್ಯಶಿ ಪೀ ॥ ೪ ॥ ಭಿನ್ನಜೀವರುಕರ್ಮ । ಭಿನ್ನಯಿವರಿಗೆಲ್ಲಮುನ್ನಿನಕರ್ಮಫ ಲ । ಬೆನ್ನಬಿಡದುಯುಂದುಪೇಳುವಶಾಸ್ತ್ರಗ । ಳನ್ನುನಂಬದಲೆನಿನ್ನನ್ನೆ ನೀಕ್ರೂಗಳಕೊಂಡತಾಪ್ಯಶಿ ॥ ೫ ॥ ನ್ಯಾಯಾರ್ಜಿತದ್ರವ್ಯದಿಂದಕಾರ್ಯಗ ಳವು । ಬಾಯುದಿಂದಲಿನಡಸಿ । ತಾಯಿಮಕ್ಕಳನೋಡುವಂತೆದೀನರಿಗೆಸ । ಹಾಯುಮಾಡುತಜ್ಞಾನಿಗಳಸೇವಿಸುತಿರು ॥ ೬ ॥ ಘೋರಪ್ರೊಭಾರಕರ್ತಗು ರುರಾಮವಿಠಲ । ತಾಹೊರವಳಗಿರುತಿಹನು । ಶರಣರಾದವರಿಗೆಭಯವೇ ನುಸ್ವಾಮಿ । ಸರ್ವರಪಾಲಿಸುವನುನಿನ್ನ ನುಮಾತ್ರಬಿಡುವನೆ ॥೭॥ ॥೧೪೦॥

ರಾಗಾ ಹಿಂದೂಸ್ಥಾನಿ ಮಟ್ಟು ತಾಳಾ ಆದಿ.

ಮರಿಯಾದೆಅಲ್ಲವ್ರೋನಿನಗೆಮನವೇ ॥ ಪ ॥ ಸರಿಯಾಗಿನಡೆಯದೆ ನೀಚಪಲಪಡುವದೂ ॥ ಅನು ॥ ಪರಧನಪರರಕಾ । ಮಿನಿಯರನೋ ಡಿಯರೆಗುಣನಗಡುಬೇಕೆಂಬದು ॥ ೧ ॥ ಆಶೆಯಿಂದಲಿವ್ಯಥಾ । ಯಾ ಸವಲ್ಲದೆ । ಯೇನು । ಲೇಸುಕಾಣೆನುಬಲುಘಾಶಿಪಡುವೆ ॥ ೨ ॥ ಕೋತಿ ಯುಂದದಿನೀ । ನೇತಕೆಕುಣಿಯುವೆ । ಮಾತುಮಾತಿಗೆನಾನು । ನನ್ನ ದೆಂಬೋದು ॥ ೩ ॥ ನಿಂತಲ್ಲಿನಿಲ್ಲದೆ । ಸಂತತದುರ್ವಿಷಯುಭ್ರಾಂತಿಯೊಳು ಮುಳುಗಿಚಿಂತಿಸುವದೂ ॥ ೪ ॥ ಗುರುರಾಮವಿಠಲನ । ಶಿರಿನಾಮದರು ಚಿ । ಸುರಿದೂಳ್ಕೃಪ್ತಿಗೊಳದೆ । ಬರಿದೆಮರುಗುವೆ ॥ ೫ ॥ ॥೧೪೧॥

ರಾಗಾ ಹಿಂದೂಸ್ಥಾನಿ ಕಾಫಿ ಆದಿ.

ಸುಳ್ಳುಗಳಬೋಧಿಸಿ । ನೀ । ಪ್ರೊಳ್ಳಾಗದಿರಲೊ ॥ ಪ ॥ ನೀರುಗ ಳ್ಳೆಯುಂಥದೇಹನಂಬಿ । ನಿಜಭಕ್ತನಾನೆಂದೂ ॥ ಅನು ॥ ಯುಳ್ಳುಕಾಳಿನ ಪ್ಪಟನರೂ । ಯಿಾತನಲ್ಲಿಭಕ್ತಿಕಾಣೆ । ಡೊಳ್ಳುತುಂಬುವದಕೆ । ನಾಲ್ಕ ಲ್ಲಿಯಲ್ಲಿಕಲಿತುಕೊಂಡು ॥ ೧ ॥ ಪರರಿಗೆಹೇಳುವಂತೆನೀನಡಯುವೆಯೋ ನೋ । ಪರಗತಿಯಾಗದು । ನಿಜನಿಜನಿಜಕಾಣೊ ॥ ೨ ॥ ನಿನ್ನಯೋ ಗ್ಯತಾನುಸಾರ । ನೀನರಿಯುಲೋಬನ್ನಬಡುವದೆ । ಸಾಕ್ಷಿಪುಣ್ಯವೇನ ದರೊಳು ॥ ೩ ॥ ಬಿಡುಬಿಡುಬಿಡುಬಿಡು । ಬಯಲಿನಡಂಭವ । ಹಿಡಿಬಿಡಿ

ಹಿಡಿಹಿಡಿಹರಿಯುರಣೆಂದವ ॥ ೪ ॥ ಶರಣಜನರನೋಡಿಶಾಂತನಾಗುತ । ಗು
ರುರಾಮವಿಠಲನಗುರುತರಿಯುದೇಸೀ ॥ ೫ ॥ ॥೧೪೨॥

ಇಂದುಶ್ರಾಯಿಸಾತನುವ್ರುನಪೆಂಚೇರಿ ಪಟ್ಟ.

ರಾಗಾ ಮುಖಾರಿ ತಾಳ ಅಟ.

ಸೋಲದೆನಿನಗಾಗಿರುವಮರಿಯಾದೆ ॥ ಪ ॥ ಮೇಲುಕೀಳರಿಯುದೆಮ
ರುಗುವೆಮನವೇ ॥ ಅ ॥ ಕಾಲಕಾಲದಿನಿತ್ಯಕರ್ಮವಮಾಡದೆಲೋ । ಯಾ
ಳಕೆಗೀಡಾಗಿ । ಬೇಳಾಡುತ್ತಿರುವದೂ ॥ ೧ ॥ ತ್ರಿವಿಧಜೀವರೊಳುಯಾ ।
ವವನೋನಾನೆಂದುತಾ । ತವಗೆಯೋಚಿಸದಪಾ । ಪವಭೋಳಿಸುವೆಥೋ॥೨॥
ತನ್ನಯೋಗ್ಯತೆಯುನ್ನುತಾತಿಳಿಯುದೆಪರ । ರನ್ನುನಿಂದಿಸಿನಾ । ಧನ್ಯ
ನೆಂದುಕೊಂಬುವೆ ॥ ೩ ॥ ಯಿಷಣತ್ರಯಗಳಆಸೆಯಿಂದಲಿನರಾ। ದೂಷಿಸಿ
ಭೂಷಿಸಿ । ಘಾಸಿಪೊಂದುವಿ ॥ ೪ ॥ ಪರಮಶಾಂತನಾಗಿ । ಗುರುರಾಮ
ವಿಠಲನಾ । ಚರಣವಭಜಿಸದೆ । ಬರಿದೆಧಾವತಿಯಾಕೆ ॥ ೫ ॥ ॥೧೪೩॥

ರಾಗಾ ಆನಂದಭೈರವಿ ತಾಳ ಅಟ.

ದಾಸನನಾನೆಂಬಧೈರ್ಯವಿದ್ದರೆನಿನಗೆ । ವಾಸುದೇವನಭಜಿಸೋ ॥
ಪ ॥ ಕಾಸಿಗೋಸುಗಪರರ । ಕಾಡಿಬೇಡುವೆಬರಿದೆ । ವೇಷಹಾಕಿದರೇ
ನು । ವೇದಾರ್ಥತಿಳದೀತೆ ॥ ಅನು ॥ ವುದರಂಭರಣಕ್ಕಾಗಿ । ಪದಪ
ದ್ಯಗಳಹೇಳಿ । ವುಂಟಾದದಿಲ್ಲವೆನ್ನುವೆ । ತುದಿಮೊದಲಿಲ್ಲದ । ದೋಷಕೆ
ಗುರಿಯಾಗಿಸದಮಲನೆಂದರೆ । ಸರ್ವರುನಗರೇನೋ ॥ ೧ ॥ ಹರಿಸ್ಮರಣೇ
ಯಿಂದಾ । ದುರಿತಪರಿಹರವೆಂದು । ಆಡುತಲಿದೆಶೃತಿಯು । ಕರಣತ್ರಯ
ವುಶುದ್ಧಿ । ಯಿರಬೇಕದಕೆಮುಖ್ಯ । ಕಾರಣಬಾಯಿಂದನುಡಿದರೇನಾ
ಯಿತು ॥ ೨ ॥ ಪಂಚಾಕ್ಷರ್ವರ್ಣವು । ಪರಮಾತ್ಮನನಾಮ । ವಂಚನೆ
ಯಿದರೊಳಿಲ್ಲಾ । ಸಂಚಿತಗಾಮಿಪ್ರಾರಬ್ಧಗಳನುಸಾರ । ಸರ್ವರುನುಡಿವ
ರುಗರ್ವೇತಕೆನಿನಗೆ ॥ ೩ ॥ ಕಾಲಕಾಲಕೆಹರಿಯೋಲಗವಮಾಡಿ । ಸಾ
ಲಗೀಲವಮಾಡದೆ ॥ ವೇಳೆಗೆದೊರತದ್ದುಭುಂಜಿಸುತಲಿಲಕ್ಷ್ಮೀ । ಲೋಲನ
ಕೊಂಡಕೊಂಡಲಿಸ್ಮರಣೆಗೈದೂ ॥ ೪ ॥ ಹೊರಗೆಡಂಬವಬಿಡು । ಒಳಗೆನಿಶ್ಚ
ಲನಾಗು । ಪರರಿಗೆಹಿತವಕೋರು । ಗುರುರಾಮವಿಠಲನುಕರುಣದಿಕೃಪಿ
ಡಿದು । ಪರಮಸೌಖ್ಯವನೀವನಿಜಭಕ್ತನಾದರೆ ॥ ೫ ॥ ॥೧೪೪॥

ರಾಗ ಹಂಸಧ್ವನಿ ತಾಳ ಆದಿ.

ದಾರಿವಳ್ಳೇದಾಗಿರಬೇಕೊ । ಹರಿದಾಸನಾದಮೇಲೆ ॥ ಪ ॥ ಯಾರೇನಂದರುಸರಿ । ಯಾವಕಾಲದಲ್ಲಿಯುಭಾರಗಾಣಹಂಥಾಯಿಸಂ । ಸಾರಮಾರ್ಗಬಿಟ್ಟುವದಕ್ಕೆ ॥ ಅನು ॥ ಜ್ಞಾನಭಕ್ತಿದಾನಧರ್ಮವೈರಾಗ್ಯ । ಗಾದಿಸದ್ಗುಣಂಗಳು । ತಾನೆತಾನಾಗೆಲ್ಲವುದೈವ್ಯ । ಧೀನವಾಗಿರಬೇಕಾದರೆ ॥ ೧ ॥ ವೋದಿದರ್ಥಮನಕೆತಿಳದುನಿರತವು । ಸಾಧನವುಮಾಡುತ । ಅನಾದಿಸಿದ್ಧವಾದತತ್ವದ । ಹಾದಿಕಾಣಬೇಕಾದರೆ ॥ ೨ ॥ ಕಾಮಕ್ರೋಧಲೋಭಮೋಹಮತ್ಸರ । ತಾಮಸಾದಿದುರ್ಗುಣ । ನಿರ್ಮೂಲವಾಗಿಪ್ರೇಮದಿಂಗುರು । ರಾಮವಿಠಲನ್ನನೆನೆವದಕ್ಕೆ ॥ ೩ ॥ ॥೧೪೩॥

ರಾಗ ಶಂಕರಾಭರಣ ತಾಳ ಅಟ.

ಆಸ್ಥಾನವಮಾಡೋಣಆತ್ಮವಿಚಾರದಾಸ್ಥಾನವಮಾಡೋಣ ॥ ಪ ॥ ಸ್ವಸ್ತಿಆಯುಷ್ಯಕೀರ್ತಿಧರ್ಮಯಶೋಕಾಮ । ಹಸ್ತಿವರದನಾಧೀನವೆಂದುನಾವೆಲ್ಲ ॥ ಅನು ॥ ಶಮದಮಕ್ಷಾಂತಿವಿರಕ್ತ್ಯುಪರತಿಯುಂಬೊ । ಶ್ರಮಮಂತ್ರಿಗಳುವಿಜ್ಞಾನಿಶ್ರದ್ಧಾಸಿಯು । ಸಮಾಧಿಕೋಶನ್ಯನೆಂಬುವರಾಜನುವಿಷಯ । ಭ್ರಮೆಯುಂಬೊಕಟ್ಟುವಿಚಾರಣೆಯಾಗುವ ॥ ೧ ॥ ಸತ್ಕರ್ಮವೆಂಬೊಭೂಮಿಯುನುಸಾಧುಗಳೆಂಬ । ವಕ್ಕಲುಗಳಿಗಿತ್ತು । ಸಿದ್ಧಾಯುಮಗಡು । ಭಕ್ತಿಜ್ಞಾನವೈರಾಗ್ಯಭಂಡಿಗಳಲಿತುಂಬಿ । ಭಗವಂತನೆಂಬರಾಜಗೆಒಪ್ಪಿಸುವಂಥ ॥ ೨ ॥ ಸ್ವಾಮಿಭೃತ್ಯನ್ಯಾಯುಯುಂಬೊಡಂಗುರವನುಹೊಯಿಸಿ । ತಾಮಸರಿಗೆನಿತ್ಯದಂಡನೆಯನುವಿಧಿಸಿ । ಕಾಮಕ್ರೋಧಗಳೆಂಬೊಖಳರಶಿಕ್ಷಿಸಿಗುರು । ರಾಮವಿಠಲನಕರುಣವೆಂಬೋಸಂಬಳಪಡದು ॥ ೩ ॥ ॥೧೪೪॥

ರಾಗ ಯದುಕುಲಕಾಂಬೋಧಿ ತಾಳ ಆದಿ.

ಹರಿಯುಕರ್ತನೆಂದರಿತವನೇಮುಕ್ತ । ಮಿಕ್ಕವಾಕೆಲ್ಲಾವ್ಯರ್ಥ ॥ ಪರಿಪರಿವಿಧದಲಿಭಾವಿಸಿನೋಡಲು । ಸರಸಿಜಭವರುದ್ರಾದ್ಯರಿಗೆಲ್ಲಾ ॥ ಅನು ॥ ಗುರುಪೂರ್ಣಪ್ರಜ್ಞಾಚಾರ್ಯರವುಕ್ತಿ । ಅನುಸರಿಸಿದವರಿಗೆ । ದೊರಕುವದೆಂದಿಗುಶಾಶ್ವತನಿಜಮುಕ್ತಿ । ಅರಿಯದವಾದಗಳೆಲ್ಲಕುಯುಕ್ತಿ । ಸರ್ವಜೀವರಲಿಹರಿಯೇವ್ಯಾಪ್ತಿ ॥ ೧ ॥ ಶೇನವಿನಾಶ್ಯಣವುಪಿನಚಲತಿಯಂಬ । ಕೃತಾರ್ಥವಗುರುಬೋ । ಧಾನುಸಾರತಿಳಿಯಲುತನ್ನ ಯಬಿಂಬಾ ।

ಮಾನಸಪೀಠದಿಹೊಳೆಯುಲಾದರುತನೆ | ದಾನಂದಸುಖಾವ್ಯಕ್ತತಾನಂಬಾ ॥ ೨ ॥ ತ್ರಿವಿಧಜೀವನಡಿಯೋಗ್ಯತೆವಿಚಾರದಲಿ | ಗುಣಕರ್ಮಗಳನುವಂಜದೆಮಾತ್ರವುತಪ್ಪದೆ | ನಡೆಸುತಲಿರುವ | ಪವನಾಂತರ್ಗತಗುರುರಾಮವಿಠಲ | ಜನನಮರಿಗೆಮಪ್ಪಿಸನುತನ್ನವರಾಗಿ ॥ ೩ ॥ ॥೧೪೩॥

ಮರಿಯಬ್ಯಾಡವೋ ಮಟ್ಟು.

ತಿಳಿಯದಾಯಿತುವಯಸ್ಸು | ಕಳೆದುಹೋಯಿತು ॥ ಪ ॥ ಖಳರಸಂಗದಲ್ಲಿಸೇರಿ | ಕಂಡಕಂಡದನುಬಯಸಿ | ಕಳವಳಸುತಕಡೆಗಾಣದೆ | ಬಳಲಿತೊಳಲಿದೆಪಾಪಹೆಚ್ಚಿ ॥ ಅ ॥ ಹಿತವಕೇಳದೆದು | ಪೃಥಿತನೆನಿಸಿದೆ | ಸತಿಸುತರೆಂಬಬಲೆಗೆಸಿಲುಕಿ | ಅತಿಶಯಮೋಹದಲಿಮುಳುಗಿ | ಪಥಿಕರಾಡುವಂತೆನಡೆದು | ಪತಿತನಾಗಿನಿಜದಮರ್ಮ ॥ ೧ ॥ ಕೆಲದಿನಆಟದಿ | ಲಲನೆಯರಕೂಟದಿ | ಹಲವುವಿದ್ಯೆಕಲಿತು | ಪರರಮಲಿಸಿಸ್ತೋತ್ರಮಾಡಿಬೇಡಿ | ಫಲವಕಾಣಲಿಲ್ಲಕೊನೆಗೆ | ಹಲುಬಿಹಲುಬಿಬಾಯಿನೊಂದು ॥೨॥ ನೀತಿಹೇಳುತಪರರನಿಂದೆಗೈಯುತ್ತಾ | ಸ್ವಾತುಮದಲಿಜ್ಞಾನವಿಲ್ಲದೆ | ಮಾತಿನಲ್ಲಿನಿಸ್ಪೃಹನಾಗಿ | ಕೋತಿಯಂತೆಕುಣಿದೆನಲ್ಲದೆಗುರುಮುಖದಲ್ಲಿಪರಮತತ್ವ ॥ ೩ ॥ ಮತ್ತನಾಗುತ | ದುರಾಸಕ್ತನೆನಿಸುತ | ನಿತ್ಯಕರ್ಮವನ್ನುತೊರೆದು | ಸತ್ಯಶಮದಮಗಳಮರೆದು | ಚಿತ್ತದಲ್ಲಿನಿರ್ಮಲನಾಗದೆ | ಚಿಂತಿಸುತಲಿನಿಜದನೆಲೆಯ ॥ ೪ ॥ ಪರಮಬೋಧೆಯಕೇಳಿ | ತರಗಿಮನದಲಿಗುರುರಾಮವಿಠಲನಶ್ರೀ | ಚರಣಕಮಲಸ್ಮರಣೆಗೈದು | ಹೊರಗುವಳಗೊಂದೆವಿಧದಿ | ಚರಿಸಿಸೌಖ್ಯಪಡೆವಬಗೆಯ ॥ ೫ ॥ ೧೪೪॥

ರಾಗಾ ಮೋಹನಾ ತಾಳಾ ಆದಿ.

ಕೋರಬೇಡದುರ್ವಿಷಯಸುಖಗಳನು | ಕೋತಿಮನವೆನೀನು ॥ಪ॥ ಯಾರಿದ್ದರೇನುನಿನ್ನಯೋಗ್ಯತೆಯ | ವಿಚಾರಿನಡಿಯಲಸಾಧ್ಯತಕಲ್ಪತು ॥ ಅ ॥ ಕಷ್ಟವದಗಲಿನಿಷ್ಠುರನುಡಿಯಲಿ | ಕೆಟ್ಟವನಿವನೆನಲಿ | ಇಷ್ಟಬಂಧುಗಳುಶತ್ರುಗಳಾಗಲಿ | ಇಲ್ಲದೆನಿಂದಿಸಲಿ | ಹೊಟ್ಟೆತುಂಬಆಹಾರವಿಲ್ಲದಿರಲಿ | ಹುಚ್ಚನೆಂದುಚ್ಚೈಯಲಿ | ಹುಟ್ಟಿಸಿದವತಾಕಟ್ಟಿಮಾಡಿರುವ | ನಷ್ಟವಾಗದಾತನಸಂಕಲ್ಪವು ॥ ೧ ॥ ನಿನ್ನನಿಜವನೀಪರರಿಗೆಬೋಧಿಸಿ | ಬನ್ನಬಡಲಿಬೇಡಾ | ದೈನ್ಯದಿಂದತಲೆಬಾಗುತನೀಖಳ | ರನ್ನುಕೇಳಬೇಡಾ | ಅನ್ಯರಂತೆತಾನಿರಬೇಕೆಂದಾ | ಯಾಸಪೊಂದಬೇಡಾ ॥

ತನ್ನತಾನೆಹೊಗಳಿಕೊಂಬುವಮನುಜನಸಖ್ಯವೆಂಬಬೇಡಾಮೂಢಾ ॥ ೨ ॥ ಹಿ
ರಿಯರಾಡುವಮಾತಿಗೆಮಾರು । ತ್ತರವನುಕೊಡಬೇಡಾ । ಪರಿಪರಿಸಂ
ಕಟಬಂದರುನೊಂದು । ಪರರದೂಷಿಸಬೇಡಾ । ಸ್ಥಿರವೀಶರೀರವೆಂದುನಂ
ಬಿಭೀ । ಯನಿಸಿಕೊಳ್ಳಬೇಡಾ । ಗುರುರಾಮವಿಠಲಕೊಟ್ಟಭಾಗ್ಯವೆ ।
ಪರಮಸುಖವೆನುತತಿಳಿಯಲೋಮೂಢಾ ॥ ೩ ॥ ॥೧೪೯॥

### ಕರೆವರೊ ನಿನ್ನ ಹಸೆಗೆ ಯೆಂಬ ಮಟ್ಟು.

ಕಾಮಕ್ರೋಧವನೆಬಿಡು । ತಾಮಸಗುಣವಸುಡು ॥ ಪ ॥ ರಾಮನಾ
ನಾಮವಜಪಿಸಿ । ರಾಜಯೋಗದಲ್ಲಿಸೇರು ॥ ಅ ॥ ಜ್ಞಾನಭಕ್ತಿವೈರಾಗ್ಯ
ವೆಂ । ಬಾನಂದದಿಮಗ್ನನಾಗಿ । ಹೀನದುರ್ವಿಷಯಗ । ಳೇನುಕೋರದಿ
ರೆಲವೊ ॥ ೧ ॥ ತತ್ವೋಪದೇಶವಕೋರು । ಸಾತ್ವಿಕರೊಳಗೆಸೇರು ॥
ದ್ವಿತ್ವವಿಲ್ಲದಂಥಸುಖ । ಮತ್ತನಾಗೋಮಾನವನೆ ॥ ೨ ॥ ಪರಬೊಮ್ಮ
ನಾದಸಿರಿ । ಗುರುರಾಮವಿಠಲನ । ಚರಣಗಳಭಜಿಸಿ । ಪರಮಸುಖಿ
ಯಾಗೆಲೋ ॥ ೩ ॥ ॥೧೫೦॥

### ರಾಗಾ ಆರಭಿ ಮಟ್ಟು.

ದೇವರದಿವ್ಯಗುಣಗಳಪೊಗಳುವದು । ಜೀವರಿಗಿದುವೆಪ್ರಯೋಜ
ನವು ॥ ಪ ॥ ಭಾವದಿತೋರುವವಿಷಯಗಳೆಲ್ಲವು । ಭಕ್ತಿಯೊಳರಿತುಸಮ
ರ್ಪಿಸುತಂ ॥ ದೇ ॥ ಅ ॥ ನಡೆವದುನುಡಿವದುಕೊಡುವದುಬಿಡುವದು । ಪ
ಡೆಯುಹರಿಯುಪ್ರೇರಣೆಯಿಂದು । ದೃಢಮನದಲಿತಿಳಿದಾಮಾಗಲುತಾ । ಪ್ರೌ
ಢಸುಖನಿಧಿಧ್ಯಾನಕೆತಂದೂ ॥ ೧ ॥ ಅರಿಯದಪಾಮರರೊರಲುವಬೋಧೆ
ಯ । ತರತರದಿತಿರಸ್ಕರಿಸುತಲೀ ॥ ಪರಮಾನಂದದಿಕುಣಿಕುಣಿದಾಡುತ ।
ಭವಭಯಗಳನೀಡಾಡುತಲಿ । ದೇ ॥ ೨ ॥ ಜನನಮರಣದೂರಪರಾತ್ಪರ
ಪಾ । ವನಚರಿತ್ರಭಾಸುರಗಾತ್ರಾ । ವನಜನಯನಗುರುರಾಮವಿಠಲ
ಯಂ । ದನುದಿನಭಜಿಸುವನೆಪವಿತ್ರಾ ॥ ೩ ॥ ॥೧೫೧॥

### ರಾಗಾ ಬೆಹಾಗ್ ತಾಳ ಆದಿ.

ಕಂಡೆರಂಗನಾಥನಾ । ಕಾಮಿತಫಲದಾತನಾ ॥ ಪ ॥ ಪುಂಡರೀಕ
ಭವನಿಂದಪೂಜೆಯನು । ಗೊಂಡುನಿಖಿಲಬ್ರಹ್ಮಾಂಡಗಳನು । ಪಾಲಿಪ
ನಾ ॥ ಅ ॥ ಕಾವೇರಿಯುತಪಶ್ಚಿಮವಾಹಿನಿಗಂಗಾ । ದೇವಿಸಮಾಗಮಸೀನೆಂದ
ನುಗ್ರಹಿಸಿದವನ ॥ ೧ ॥ ದೋಷವಿದೂರವಿಭೀಷಣಗೊಲಿದನ । ಭೂಪಾ

ಪತಿಪ್ರಮುಖಾಮರನುತಪದಯುಗನ ॥ ೨ ॥ ನಾಗಶಯನನಾಗಿಭೋಗವಿ
ತರಣನು । ರಾಗದಿಸಲಹುವಭಾಗೀರಥಿಯಜನಕನ ॥ ೩ ॥ ಲೋಕಪಾ
ವನಿಕಾವೇರಿಯಾರಡುಗಡೆ । ಗೋಕವಾಗಿಸುತ್ತಿರೆಮಧ್ಯದಿನೆಲಸಿಹನಾ ॥ ೪ ॥
ಮಂಗಳಾಂಗಗುರುರಾಮವಿಠಲಶ್ರೀ । ರಂಗಪಟ್ಟಣನಿಕೇತನವಮಾಡಿರು
ವನ ॥ ೫ ॥ [೧೫೨]

ರಾಗ ಮಧ್ಯಮಾವತಿ ತಾಳ ಆದಿ.

ಹೊಟ್ಟೆನಿನ್ನಿಂದಲೆನಾಕೆಟ್ಟೆ । ನಮೋಳಿಬಿಟ್ಟೆ ॥ ಪ ॥ ಕಟ್ಟ
ಮಾಡಿಪರರಕಷ್ಟವನರಿಯದೆ । ಕೆಟ್ಟವನೆಂಬಪಕೀರ್ತಿಯಪಡೆಯುವ ॥
ಅ ॥ ಒಂದುಹೊತ್ತಿಲ್ಲದಿದ್ದಲುತಾಳಲಾರೆ । ನಿನಗಾಗಿನೀಚ । ವೃಂದವ
ಯಾಚಿಸಿನಾಬಳಲಲಾರೆ । ತಂದೆತಾಯಿಗಳನ್ನಾಡರುವಂಚಿಸಿ । ಮುಂ
ದಾಗುವಕೇಡರಿಯದಿರುವಹಾಳು ॥ ೧ ॥ ಹೆಚ್ಚುಕೊಟ್ಟರೂವಲ್ಲೆಯೆಂಬೆ ।
ಕಡಮೆಯಾದರೂಬಾಯಿ । ಮುಚ್ಚಲೀಸದೆದೇಹಿಯೆಂಬೆ । ತುಚ್ಛರಸೇ
ವಿಸಿಅನ್ಯಾಯಾರ್ಜಿತ । ಹುಚ್ಚುಹಿಡಿಸುವೆಯೋನೊನೀಕೊನೆಗೆ ॥ ೨ ॥
ನಿನಗಾಗೀಸಕಲವಿದ್ಯೆಗಳರಿತು । ಸಭೆಯೊಳುವಾದಿಸಿ । ಜನವಮೆಚ್ಚಿಸಿ
ಹಣವತೆಗೆದು । ದಿನದಿನತುಂಬುತಲಿದ್ದರುಗುಣಾವಳಿ । ಮನಸುಚಪಲವಮಾ
ಡಿತಹತಹಪಡಿಸುವ ॥ ೩ ॥ ವ್ಯವಸಾಯೋದ್ಯೋಗವ್ಯಾಪಾರಗಳು ।
ಯಾಚನೆಕಷ್ಟ । ಭವಣೆಭಾರವಾಹಕತ್ವವೊದಲು । ದಿವಸದಿವಸವಮಾ
ಡುತನಿನ್ನೊಲಿಸಲು । ಜವನಾಳ್ಗಳಕೈಗೊಪ್ಪಿಸುವೆಕಡೆಗೇ ॥ ೪ ॥ ಜ್ಞಾನನಿ
ಷ್ಠಾಕಮಧರ್ಮದಾನ । ಸಂಧ್ಯಾಜಪತಪಸ್ನಾನಾನುಷ್ಠಾನಸತ್ಸಾಧನಾ ।
ಯೇನುನಡಿಯಲೀಸದೆದಿನದಿನದಲಿ । ನಾನುನನಗೆಯನ್ನಿಕಬಾಯಿಬಿಡಿ
ಸುವೆ ॥ ೫ ॥ ಮುಷ್ಕರದಿಂದನಿನ್ನನೋಯಿಸಲು । ಕರಗಿಯಲ್ಲ । ಕು
ಷ್ಕವಾಗುವದುತೃಪ್ತಿಪಡಿಸಲು । ಪುಷ್ಕಳವಾಗಾಯುಮ್ಕರವಮಾಡುವೆ ।
ನಿಷ್ಕಾರಣವಲ್ಲವುನೀಜಗದೊಳು ॥ ೬ ॥ ಕೊಟ್ಟಷ್ಟರಲ್ಲಿತೃಪ್ತಿಹೊಂದು ।
ಸಾಲದಿರಲು । ಪಿಟ್ಟೀಕನ್ನೊಳುಡದಯವಮಾಡಿಂದು । ಧಿಟ್ಟಶ್ರೀಗುರುರಾಮ
ವಿಠ್ಠಲನಂಘ್ರಿಯು । ಮುಟ್ಟಿಭಜಿಸಿಸಂತುಷ್ಟಿಯಪಡೆವೆನು ॥ ೭ ॥ ॥ ೧೫೩ ॥

ರಾಗ ಜಂಜೂಟಿ.

ಹೊತ್ತುಹೋಗುತಿದೆವ್ಯರ್ಥವಾಗಿ ॥ ಪ ॥ ಮತ್ತೆಮತ್ತೆಆಸೆಹೆಚ್ಚುತ್ತಿ
ದೆತಿಳಿಯದೆ ॥ ಅನು ॥ ಮನುಜಜನ್ಮಬಂದುದಕೆಫಲವೇನು । ಕೊನೆಗಾ

ಣುವಪರಿಕಾಣೆನಿನ್ನ । ಮನಸಿಗೆಬಂದಕೆಲದಿವಸಗಳಾಡಿ ॥ ೧ ॥ ಮರಣವಾಗುವಜೀವಗಳಕಂಡು । ಸ್ಥಿರವಿಲ್ಲನಮಗೆಂದುನೊಂದು । ಹರಿಸುಕನಕಲ್ಪಕನಕಬಾಳಬೇಕೆಂದು ॥ ೨ ॥ ವೇದಶಾಸ್ತ್ರಪುರಾಣಗಳೋದಿ । ವಾದಿಸುತ್ತಪರರೊಳುಕಾದಿ । ಭೇದಾಭೇದವೆನುತ್ತಕೂಗುತ್ತಬೆಂಡಾಗಿ ॥ ೩ ॥ ನಿಜವಾದಬಂಧುಗಳನ್ನಬಿಟ್ಟು । ಕುಜನರೊಳಗೆಸ್ನೇಹವಿಟ್ಟು । ಭಜನೆಮಾಡದೆಹರಿಯ । ಬಳಲಿಕೆಪಟ್ಟು ॥ ೪ ॥ ಹರಿಕೃಷ್ಣವಾಸುದೇವಯನುತ । ಗುರುರಾಮವಿಠ್ಠಲನಸತತ । ಸ್ಮರಿಸಿಸುಖಿಸದೆ । ನರರಿಗೆಬಾಯಿಬಿಡುತಾ ॥ ೫ ॥ ॥೧೫೪॥

ರಾಗ ಸುರಟಿ ಅಟತಾಳ.

ಮಮತೆಯಾಕೆಸಂಸಾರದಿನಿನಗೆ । ಮರುಳುಜೀವವೆಯೋನುಕಾಣುವಕೊನೆಗೆ ॥ ಪ ॥ ಸರ್ವಾಧಿಕಕೃಷ್ಣನಚರಣಕಮಲಗಳಿಗೆಸರ್ವಸಮರ್ಪಣೆಮಾಡದೆಯಿದರೊಳು ॥ ಅನು ॥ ಯಮನಿಯಮಾಸನಪ್ರಾಣಾಯಾಮಗಳು । ಕ್ರಮವತಿಳಿಯಲಿಲ್ಲನೀಹಗಲಿರುಳು । ಸಮರಾರೆನಗೆಂದುಗರ್ವದಿಮೆರೆಯಲು । ಯಮನವರೆಳೆಯದೆಬಿಡುವರೇಛೀಹುಚ್ಚ ॥ ೧ ॥ ಇಂದ್ರಿಯಂಗಳುನಿನ್ನಾಧೀನವಲ್ಲ । ಬಂದಮಾರ್ಗಸುಖಮರತುಹೋದೆಯಲ್ಲ । ಮುಂದಿನಗತಿಗೋಕ್ರಮವೊದಲಿಗೆಯಿಲ್ಲ । ಮುಪ್ಪುಕನಪುಕತ್ರಿರೇಬಂದಿತಲ್ಲ ॥ ೨ ॥ ಕರ್ಮವೆಂಬುವದೊಂದುಅನಾದಿಯಾಗಿ । ಧರ್ಮವಳಿಸುವವನೆಪರಮತ್ಯಾಗಿ । ನಿರ್ಮಲಮನದಿದುರಾಶೆಯನೀಗಿ । ಮರ್ಮವನರಿತುಕೊಂಡವನೇಮಹಾಯೋಗಿ ॥ ೩ ॥ ಆಗುವಕಾರ್ಯವುನಿಲ್ಲದುಕೇಳು । ಭೋಗದಾಸೆಬಿಡುಮೂರುದಿನದಬಾಳು । ರಾಗದ್ವೇಷವುಕ್ಷವಗೆಮನೆಹಾಳು । ಕೂಗುತಿಹವುಶ್ರುತಿಸ್ಮೃತಿಪುರಾಣಗಳು ॥ ೪ ॥ ಸತಿಸುತರನುನಾನೆಸಲಹುವೆನೆಂದು । ಮತಿಗೆಟ್ಟುಭ್ರಾಂತಿಹೊಂದುವೆನೀಮುಂದು । ಮಿತಿಯುಬರಹಕಪ್ಪುವದಿಲ್ಲಯಿಂದು । ಸಕಲವುಪ್ರೇರಕಶ್ರೀಪತಿಗುಣಸಿಂಧು ॥ ೫ ॥ ಆಹಾರನಿದ್ರೆಯಲ್ಲವೆನಿನ್ನಆಟ । ಸಾಹಸನೋಡೆಮಾಳಿಗೆಯಪ್ರೌಢ್ಯಾಟ । ಮೋಹದಿಂದಲಿಮುಂದೆಬರುವದುಗೊಟ । ಮೂಜಗದೊಳಗೆಲ್ಲಯಿದುಗೊಂಬೆಆಟ ॥ ೬ ॥ ಕಾಮಕ್ರೋಧಂಗಳಬಿಡಲಾರೆಯೇನೋ । ಧೀಮಂತಜೀವನಸ್ವಾತಂತ್ರ್ಯನೀನೋ । ಯಾಮಯಾಮ

ಕೆಗುರುರಾಮವಿಠಲನ ಭೃ । ನೇಮದಿಂದಲಿಭಜಿಸೆಸುಖವಾಗುವದು.ಶಾ ಣೆ ॥ ೩ ॥ ॥೧೫೫॥

ಕಮಲಾಕ್ಷಿ ನಾಂಧಸ್ಯನಾದೆ ಮಟ್ಟು.

ನಮಗಾ್ಯಕೀಯಿಗಾಸಂಸಾರಚಿಂತೆ । ಶ್ರಮವಾಗಿಧರ್ಮದೊಳಿದ್ದ ರ ॥ ಪ ॥ ಸಮನಾಗಿಬಾರದ । ಮಮಕಅಧಿಕವಾದ । ಭ್ರಮೆಯಾಯಿ ದು । ಶ್ರಮವಾಗೋದು । ಕ್ಷಮೆಬಾರದು । ಯಿದರಲ್ಲಿ ॥ ಅನು ॥ ಯಿವ ರಾರುನಮಗೆ । ನಾವಾರಿವರಿಗೆ । ಜವನವರು । ಯಳೆಯುವರು । ಯಾ ರುಬರರು । ಸಂಗಡ ॥ ೧ ॥ ಅನುಸಾರಿಗಳಲ್ಲಾ । ಮನಸೇಜಿಕವಿ ಲ್ಲಾ । ಕೊನೆಗೆದಿಕ್ಕಿಲ್ಲಾ । ನೀನೆಶಿರಿನಲ್ಲಾ । ಕಾಯಜೇಕಿಲ್ಲಾ । ನಿ ಜವು ॥ ೨ ॥ ತಾಯಿತಂದೆಅಣ್ಣ । ತಮ್ಮಸತಿಸುತರು । ಕಾಯಕಲ್ಲಿ ನಿ । ಮಾಯಬರಿದೆ । ಜೀವಗೆಲ್ಲದೆ । ಕಾಸ್ತ್ರಾದಿ ॥ ೩ ॥ ದ್ವಾಸುಪರ್ಣ ಯಿಂದು । ವಾಕ್ಯತಿನೋಡಲು । ಯಿಶಾಕನಾಧೀನಾ । ಸಕಲಜೀಕನಾ । ಯಾತಕ್ಕಭಿಮಾನ । ಅಜ್ಞಾನ ॥ ೪ ॥ ಗುರುರಾಮವಿಠ್ಠಲ । ಹೊರವೊಳ ಗಿದ್ದಿಲ್ಲಾ । ಕರುಣಿಸುವನು । ಸರ್ವಾಧಾರನು । ತನ್ನವರನು । ಭಯ ವೇನು ॥ ೫ ॥ ॥೧೫೬॥

ಯಾಲವಲಚಿತಿನಿಪ್ರೋ ಮಟ್ಟು.

ಸುಂದರಾಂಗಿತಂದುತೋರೆ.। ಯಿಂದಿರೆಮನೋಹರನ ॥ ಪ ॥ ಮಂ ದುಕ್ಷಣತಾಳಲಾರೆ । ವಂದಿಸುವೆನೆಲೇನೀರೆ ॥ ಅನು ॥ ಚಂದ್ರಕಿರಣಗಳು ರಿ । ಯಂದದಿತೋರುತಲಿದೆ । ಮಂದಮಾರುತಗೆಕಡು । ಕಂದಿದೆನೆಮಂದ ಯಾನೆ ॥ ೧ ॥ ಮಾರನಾಟದೆಲ್ಲಿವೊಂದು । ಬಾರಿಸೊಕ್ಕಿಸೋಲಿಸುತ । ಸೇ ರಿದಸುಖಮರೆಯು । ಲಾರೆನೆಸರೋರುಹಾಕ್ಷಿ ॥ ೨ ॥ ಭೂತಳಕಧಿಕವಾ ದ । ನೂತನಾಮರಣಪುರಿ । ದಾತಗುರುರಾಮವಿಠಲ । ಯಾತಕೆನಿರ್ದಯ ಗೈದ ॥ ೩ ॥ ॥೧೫೭॥

ಶ್ರೀನಿವಾಸಬಾರೊಮನಕೆ ಮಟ್ಟು.

ಮರತಿರಲಾರೆ । ಪ್ರೀಯನ । ಮಾರನೈಯ್ಯನ ॥ ಪ ॥ ಇರಳುಹಗ ಲುಅನುಸರಿಸಿತಿರುಗುತಲಿ । ಸುರತವಾರ್ತೆಗಳನಾಡುತನಲಿಸುತಿಹನ ॥ ಅ ನು ॥ ಯೆನಗೆಬೇಕಾದುದಕನಗೆತಾಕೊಡುತಲಿ । ಮನಕೆಹರುಷಕೊಡು ವನ । ತ್ರಿಲೋಕಸುಂದರನ ॥ ೧ ॥ ಯನ್ನನೋಡುತಲಿಹಿಗ್ಗುತಲಿರುವ

ವ । ಕಣ್ಣಲ್ಲಿಕಾಣದೆಧಳಗೆಯುಗವಾಗಿರುವದಲಿ ॥ ೨ ॥ ಕಾಮವಿಚಾ
ರದಿಕಥೆಗಳಪೇಳುತ । ಪ್ರೇಮದಿಬಿಗಿದಪ್ಪುತಮುದ್ದಿಸಿಲಾಲಿಪನ ॥ ೩ ॥
ನೊದಲಿಂದವಗೆನ । ಗೊದಗಿದಸ್ನೇಹವ । ಚದುರನಸರಸವು । ವಿಧವಿಧ
ಬಹುಲೀಲೆಗಳ ॥ ೪ ॥ ಜನುಮಜನುಮಕಾಯಿವನೆಪ್ರಿಯ್ಯನಾಗಿರು । ಲೆ
ನುತಬೇಡುವೆನೆವನಚಾತ್ರಿಯೊಳನುದಿನ ॥ ೫ ॥ ಅವನಿಲ್ಲದಸೌಖ್ಯವ್ರನರ
ಕಕೆಸಮ । ಸವಿಯಸಾಗದುಅವ್ಯತವುವಿಷವಾಗುವದಲಿವುನಕೆ ॥ ೬ ॥ ಕ
ರುಣಿಮಣಿಯೆಕೇಳಿಗುರುರಾಮವಿಠಲನ । ಚೆರವಸೌಖ್ಯಯಿನ್ನುಸರಿಯಾ
ವದಜಗದೊಳು ॥ ೭ ॥ ॥೧೯೪॥

ರಾಗ ನಾದನಾಮಕ್ರಿಯ ತಾಳ ಆದಿ.

ಯೇನಿದುಸಂಸಾರ । ನೋಡಿದ । ರಿದುವೆಮಹಾಘೋರ ॥ಪ॥ ನಾ
ನಾವಿಧಕೋರಿಕೆಯಿಂದನುದಿನ । ನರಳುತನೀರೊಳುಕ್ಕಿಬಿಟ್ಟಂತಿಹು । ದೇ
ನಿದು ॥ ಅನು ॥ ಮಂದುಲಾಭಬರಲು । ನಷ್ಟವೆರಡೊಂದಾಗುವದಿದರೋ
ಳ್ । ಹಿಂದಿನಭವಪ್ರತಿಯವಾರಕೆಲ್ಲರುತಾವು । ಮುಂದೆಸುಖಪಡುವೆವೆಂದರಿ
ತಿರುವರು ॥ ೧ ॥ ತನ್ನಂತಾನಾಯಿತೆಂಬರು । ಕಾನ್ನಿಗಳರಿಯದಲೆ । ಬ
ನ್ನಬಡುವರೆಲ್ಲಬ್ರಹ್ಮವಾದರೆ । ಯಿನ್ಯಾಕೆಶೃತಿಸ್ಮೃತಿಪುರಾಣಂಗಳು ॥೨॥
ಗುರುರಾಮವಿಠಲನು । ವಳಹೊರಗಿರುತೀಜಗವನ್ನು । ಕರುಣದಿಪ್ರೇರಿ
ಸುವನವನತಿಳಿದರೆ । ಬರುವದುಲಿಬ್ಯಾಟ್ಟರಕೆಸರ್ವವು ॥ ೩ ॥ ॥೧೯೫॥

ರಾಗ ಶಂಕರಾಭರಣ ತಾಳ ಅಟ.

ಅದ್ವೈತಿನಾನೆನ್ನಬೇಡ । ನಿರವದ್ಯಸದ್ಗುಣಪೂರ್ಣನೀನೇನೋ
ಡುಂಢ ॥ ಪ ॥ ಅದ್ವೈತಿನಾನೆಂದುಆಡುವೆಬಾಯೊಳು । ಬುದ್ಧಿಹೀನನವೆಅ
ರ್ದ್ಯಪದ್ಧತಿಯನುಬಿಟ್ಟು ॥ ಅನು ॥ ಬ್ರಹ್ಮಜಿಜ್ಞಾಸದಕ್ರಮವ । ನಿರ । ಹ
ಮ್ಮಿನೊಳಲ್ಲದೆ । ತೋರ್ಪದೆನಿಜವ । ಸಮ್ಯಕ್ಸ್ಯಾಧಿಸದೇಹಂಬ್ರಹ್ಮಾಸ್ಮಿ
ಯಂಬುವ । ಆಮ್ನಾಯವಾಕ್ಯಕೆಅರ್ಥವತಿಳಿಯದೆ ॥ ೧ ॥ ಯೇಕಮೇ
ವದ್ವಿತೀಯಬ್ರಹ್ಮಶ್ರುತಿಗೆ । ಕಾಕುವಗಾಡುತಲರ್ಥಪೇಳ್ವದಧರ್ಮ।ಯೇಕವಾ
ವ್ರುದುಯಿನ್ನನೇಕವಾವುದುಯೆಂದು । ನೀಕಳವಳಸುತನಿಜತತ್ವವರಿಯ
ದೆ ॥ ೨ ॥ ಆತ್ಮಾನಾತ್ಮಗಳೆಂದರೇನು । ಪರ । ಮಾತ್ಮಜೀವಾತ್ಮರೊ ।
ಜೀವದೇಹಗಳೊ । ಸ್ವಾತ್ಮಾನುಸಂಧಾನದಿಂದಲಿನೋಡ । ಧ್ಯಾತ್ಮವಿ
ದ್ಯಾಭ್ಯಾಸವಮಾಡದೆಬಾಯೊಳು ॥ ೩ ॥ ರವಿಗಣಪತಿಶಿವಶಕ್ತಿ । ಭೈ । ರ

